श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

पञ्चदशव्याख्याविलसितः



चतुर्थो भागः / १८-२१ अध्यायाः

प्रकाशनम् - श्रीमन्मध्वाचार्यमूलमहासंस्थानम्, श्रीउत्तरादिमठः
विश्वमध्वमहापरिषत् बसवनगुडि, बेंगळूरु – ४

विश्वमध्वमहापरिषत् ग्रन्थमाला – २१०

श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

पञ्चदशव्याख्याविलसितः

अष्टादशाध्यायतः एकविंशोऽध्यायान्तः

## चतुर्थो भागः




...सम्पादकाः...

पं. हेब्बूर श्रीनिवासतीर्थाचार्यः, दि. पं. पुराणिक जयतीर्थाचार्यः

पं. वादिराजाचार्य करणम्, पं. वेदव्यासाचार्य श्रीनिवासाचार्य इटगि

...प्रकाशनम्...

श्रीमन्मध्वाचार्यमूलमहासंस्थानम् श्रीउत्तरादिमठः

**विश्वमध्वमहापरिषत्**

वसवनगुडि, वेंगळूरु – ४

२०२१

## Mahabharata Tatparyanirnaya Vol – 4. With 15 commentaries


| | |
|---|---|
| **Edited by** | **Pt. Hebbur Srinivasatirthacharya**<br>**Pt. Late. Jayateerthacharya Puranik**<br>**Pt. VadirajAcharya Karanam**<br>**Pt. Vedavyasacharya Sreenivasachar Itagi** |
| Published by | **Vishva Madhwa Maha Parishat**<br>Research Center,<br>Phone : 080 42103176 |

| **Edition** | **Year** | **Copies** | **Total** |
|---|---|---|---|
| First | 2021 | 1,000 | 1,000 |

| | |
|---|---|
| No.of Pages | lvi+786 = 842 |
| © | Reserved |
| Price. | **Rs. 750/-** |
| Type Setting | V.M.M.P Research wing |
| Cover Design by | GopalaKrishna Davanagere |

**Copies can be had from**

**Vishva Madhwa Maha Parishat**
Research Center, #11, 2nd Floor,
Uttaradi Math Building. Uttaradi Math Road,
Shankarpuram, Basavanagudi
BANGALORE - 4 Phone : 080 42103176

Printed by : **VAGARTHA,**
Hanumantha Nagar, Bangalore- 19 Ph.22427677.

V.M.M.P PUBLICATION NO – 208

# MAHABHARATATATPARYANIRNAYA

of

## Sri Madhwacharya

## With 15 commentaries

## Vol - 4

### 18 to 21 Chapters

Editors :

Pt. Hebbur Srinivasatirthacharya, Pt. Late. Jayateerthacharya Puranik

Pt. Vadirajacharya Karanam, Pt. Vedavyasacharya S Itagi

... Published By...

Jagadguru Sri Madhwacharya Moola Maha Samsthana

**SRI UTTARADIMATH**

Vishva Madhwa Maha Parishat

BANGALORE - 4

2021

अस्मिन् पुस्तके मुद्रितानि

## पञ्चदशव्याख्यानानि

| | | |
|---|---|---|
| १ | श्रीव्यासतीर्थविरचिता | भारतभावपञ्चिका |
| २ | श्रीवेदाङ्गतीर्थविरचिता | तात्पर्यदीपिका |
| ३ | श्रीवादिराजतीर्थविरचिता | भावप्रकाशिका |
| ४ | श्रीसत्याभिनवतीर्थविरचिता | दुर्घटार्थप्रकाशिका |
| ५ | श्रीमधुसूदनभिक्षुविरचितः | प्रमाणसङ्ग्रहः |
| ६ | श्रीआद्यवरदराजाचार्यविरचिता | मन्दसुबोधिनी |
| ७ | श्रीजनार्दनभट्टविरचिता | पदार्थदीपिका |
| ८ | श्रीअनन्तभट्टविरचिता | तन्त्रमाला(सत्तत्वमाला) |
| ९ | श्रीअनन्तभट्टविरचिता | लघ्वनन्तभट्टीय |
| १० | श्रीताम्रपर्णी श्रीनिवासाचार्यविरचिता | प्रमेयमणिमाला |
| ११ | श्रीभारतश्रीनिवासाचार्यविरचिता | तात्पर्यनिर्णयटिप्पणी |
| १२ | श्रीनिवासाचार्यविरचिता | भावचन्द्रिका |
| १३ | श्रीरामाचार्यविरचिता | भावविवृतिः |
| १४ | श्रीतिरुमलाचार्यविरचिता | अतिविशदवाक्यार्थविवृतिः |
| १५ | श्रीचट्टीकोनेरीआचार्यविरचितः | सर्वटीकासङ्ग्रहः |

।। श्रीदिग्विजयरामो विजयते ।।

श्रीमत्परमहंसपारिव्राजकाचार्यत्वाद्यनेकगुणगणालङ्कृत श्रीमन्मूलसीतासमेतश्रीमन्मूलरामदिग्विजयराम-वेदव्यासादिपादपद्माराधक श्रीमद्वैष्णवसिद्धान्तप्रतिष्ठापनाचार्यजगद्गुरुश्रीमन्मध्वाचार्यमूलमहासंस्थान श्रीमदुत्तरादिमठाधीश श्री श्री १००८ श्रीरघुत्याभिज्ञतीर्थकरकमलसञ्जात श्री श्री १००८ श्रीसत्यप्रमोदतीर्थवरकुमार श्री श्री १००८ **श्रीसत्यात्मतीर्थश्रीपादानां**

# अनुग्रहसन्देशः

प्राचां रामायणमहाभारतभागवतप्रभृतिग्रन्थराजाः परिपूर्णभारतीयसंस्कृतेः तथा सनातनधर्म-परम्परायाः बीजभूताः विराजन्ते । ते च भगवति श्रद्धां, वर्णाश्रमोचितधर्मनिष्ठां, परोपकारमनीषां, गुरुषु विनयं, परलोकसाधनोपायं, संसारे विरक्तिं, हरौ सर्वोत्तमत्वदोषदूरत्वजगज्जन्मादि-कारणत्वादिप्रज्ञां, सर्वाधिकभक्तिं वर्धयन्ति । तथापि स्वभाषानभिज्ञजनान् उत्पथं प्रवर्तयन्ति सुपथः प्रच्यावयन्ति च । तेन आभीलं दुर्गतिं लभन्ते इति निश्चप्रचम् ।

त्रैलोक्याचार्याः श्रीमदानन्दतीर्थभगवत्पादाः ब्रह्मसूत्रनिर्णीतराद्धान्तप्रणाल्या भगवत्कृत-पञ्चरात्राद्यविरोधेन वेदव्यासहृदयङ्गमार्थविलासं इतिहासपुराणादीनां प्रदर्श्य सन्मार्गतः स्खलज्जनान् उद्दध्रुः । तदर्थं श्रीमदाचार्यैः विरचितोऽयं समस्तशास्त्रार्थविनिर्णयात्मकः, समस्तसन्देहनिवारणात्मकः ग्रन्थः श्रीमन्महाभारततात्पर्यनिर्णयः ।

ग्रन्थोऽयं साक्षाद्व्यासाज्ञां शिरसि परमादरेण अनर्घ्यशिरोरत्नवन्निधाय विरचितः । भगवतः वेदव्यासस्य परमप्रेमास्पदः भगवन्माहात्म्यज्ञानवृद्धिदः । भगवद्भक्तिप्रवृद्धिदः । नानासंशीति-निवृत्तिदः परमपुरुषार्थप्रदश्च साधकानाम् । अतिगभीरार्थस्य विश्वतोमुखस्यास्य ग्रन्थस्य आशयं प्रकटयितुं महानुभावाः दशाधिकव्याख्यातारः स्वकीयया विशिष्टसरण्या अपूर्वप्रकृष्टव्याख्यानेन परमोपकारं अतन्वन् । तेषु नैककृतीः अस्मत्स्वरूपोद्धारकाः परमपूज्याः अस्मद्गुरवः भूयसा श्रमेण नैकस्थानेभ्यः सङ्गृह्यास्मान्परमानुग्रहेणापूरयन् ।

काश्चन अपूर्वव्याख्यानानां मूलमातृकाः पं. व्यासनकेरे प्रभञ्जनाचार्याः, पं.मळगि जयतीर्थाचार्याः, पं. बन्नञ्जे गोविन्दाचार्याः, पं. पगडाल् राममूर्त्याचार्याः, पं. नागसम्पिगे आनन्दतीर्थाचार्याः, पं. प्रदीपसिंहाचार्याः, पं साणूरु कृष्णमूर्त्याचार्याः तथा महिशूरस्थ प्राच्यसंशोधनग्रन्थालयः तथा चेन्नै प्राच्यसंशोधनालयः सज्जनोपकाराय प्रकाशनाय ददुरिति तेषां सेवां सामोदं स्मरामः ।

नैकव्याख्यानैः सहितं श्रीमन्महाभारततात्पर्यनिर्णयग्रन्थं मुद्रापयित्वा उत्तरादिमठतः तथा विश्वमध्वमहापरिषद्द्वारा प्रकाशयितुं सङ्कल्प्य पं. श्रीनिवासतीर्थाचार्यं तथा पं. पुराणिक् जयतीर्थाचार्यं च एतद्ग्रन्थसम्पादनकार्ये अज्ञापितवन्तः । अस्य महतो ग्रन्थस्य सम्पादनविषये पं.

वेदव्यासाचार्यः इटगि तथा पं. वादिराजाचार्यः करणम् एतावपि कृतपरिश्रमौ वर्तेते । एते महता श्रमेण जीर्णानि नैकलिपिलिखितानि हस्तलिखितव्याख्यापुस्तकानि संशोध्य आरम्भिकाक्षर-संयोजनमाकरावलोकनं च कृत्वा सम्पादनं चक्रुः ।

आचार्यचरणनिरूपितप्रमेयानां तथा आख्यायिकानां विषये मूलप्रमाणानि, इतिहासपुराणानि, पञ्चरात्रमन्वादिस्मृतीश्च अधीत्य सूक्ष्मशेमुष्या विचार्य संवादितया पादटिप्पण्यां तेषां संयोजनेन श्रीमदाचार्याणां महतीं सेवां एते अकृषत । अर्वाचीनाः केचन आचार्योक्तवचांसि अप्रमाणानीति आक्षिपन्ति, निराधारविषयान् निरूपयन्ति इति अपवदन्ति एतदाक्षेपापवादप्रक्षालनक्षमानि मूलप्रमाणानि अत्र संयोजितानि इत्येतत् आचार्यवचसां प्रामाण्यस्थापने एतेषां श्लाघनीयप्रयत्नः । पं. प्रमोदाचार्यः पडसलगि, पं कल्लूरु प्रभञ्जनाचार्यः, पं.कल्लूरु सुहृदाचार्यः पं रामाचार्यः कट्टि इत्येते अस्मदन्तेवासिनः मूलकोशपठनेन ग्रन्थशुद्धिसम्पादने श्रमं आवहन् ।

महापतिव्रतायाः पाञ्चाल्याः पञ्चपतित्वविषये प्रपञ्चे विप्रतिपत्तिः प्राचुर्येण जागर्ति । पुराणेषु महाभारते च तत्स्वरूपे नानाविधवाक्यजालानि मोहजालप्रसरणपटीयांसि दरीदृश्यन्ते इति विदितचरमेव । आचार्यचरणैः अस्यां स्वकृतौ तैः जायमाना: विभ्रमाः व्युदस्य समाधिः समाहितः ।

द्रौपद्याः पञ्चपतिभिः विहारविषये, प्रत्यहं जायमानकन्यात्वगोचरप्रक्रिया विशदतया मन्दमतिमत्यारोहणानुकूलतया अमन्दमतिना न्यरूपि । पं श्रीनिवासाचार्येण अनयोः विषययोः सविवरणं निरूपणं तथा विविधशास्त्राणां, विद्वदभिप्रायाणां विमर्शश्च स्वकीयप्रस्तावने सम्यगकारि। तथा भूगोलखगोलानां परिमाणगोचरप्रक्रिया व्याख्यातृविचारविवरणसाहित्येन सुलभबोधानुकूलं यथा भवति तथा निरूपितं वर्तते ।

धर्मराजस्य शिशुपालतनुजया परिणयस्य धर्मसम्मतत्वमपि प्रदर्शयाञ्चक्रे । इतः पूर्वं अध्यायत्रयात्मकः प्रथमो भागः, षडध्यायात्मकः द्वितीयो भागः, अष्टाध्यायलक्षणः तृतीयभागश्च प्रकाशितः । इदानीं अग्रेतनः चतुरध्यायात्मकः चतुर्थो भागः प्रकाश्यते । अखण्डश्रीमन्महाभारत-तात्पर्यनिर्णयसम्पादनं एवमेव तूर्णं पूर्णं स्यात् । इतरविषयसंशोधनमपि एवमेव प्रवर्तताम् । अस्याः कृतेः सुसंयोजनं पं. जोशि महिदासाचार्यः महता परिश्रमेण अकरोत् ।

सर्वानेतान्ज्ञानभक्तिवैराग्यादिभिः अनुगृह्णन्त्विति अस्मदुपास्यान् श्रीमूलसीतासमेतश्रीमूलराम-दिग्विजयरामवेदव्यासान् प्रार्थयामहे । अस्य ग्रन्थस्य उपयोगं सर्वे सुजनाः लभन्तामिति च आशास्महे ।

श्रीसत्यात्मतीर्थः
उत्तरादि मठः

इति नारायणस्मरणानि

**श्री सत्यात्मतीर्थश्रीपादाः** उत्तरादिमठः

## ಆಶೀರ್ವಚನ

ಶ್ರೀಯುತ ಶೇಷ ಜಯರಾಮಾಚಾರ್ಯ ಮೊಖಾಶಿ ಇವರು ತಮ್ಮ ತಂದೆ-ತಾಯಿಗಳಾದ ಪದ್ಮಾವತಿ ಶ್ರೀಜಯರಾಮಾಚಾರ್ಯ ಮೊಖಾಶಿ ಶೂರ್ಪಾಲಿ ಇವರ ಸ್ಮರಣಾರ್ಥ ಈ ಕೃತಿಯ ಪ್ರಕಾಶನದ ಸಂಪೂರ್ಣ ವೆಚ್ಚವನ್ನು ಭರಿಸಿ, ವೇದವ್ಯಾಸದೇವರ ವಿಶೇಷಸೇವೆ ಮಾಡಿದ್ದಾರೆ.

ಭಗವಂತ ಶ್ರೀಮತಿ ಸಂಧ್ಯಾ ಶ್ರೀ ಶೇಷ ಮೊಖಾಶಿ ದಂಪತಿಗಳಿಗೆ ಅವರ ಕುಟುಂಬಕ್ಕೆ ಇತೋಽಪ್ಯತಿಶಯವಾಗಿ ಶ್ರೀಮದಾಚಾರ್ಯರ ಸೇವೆ ಮಾಡುವ ಸೌಭಾಗ್ಯ ಕೊಟ್ಟು, ಸಾಧನೆ ಮಾಡಿಸಲಿ ಎಂಬುದಾಗಿ ಅಸ್ಮದುಪಾಸ್ಯ ಶ್ರೀಮೂಲಸೀತಾಸಮೇತ-ಮೂಲರಾಮ, ದಿಗ್ವಿಜಯರಾಮ, ವೇದವ್ಯಾಸದೇವರಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ.

**ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು**
ಉತ್ತರಾದಿಮಠ

## ಸಮರ್ಪಣೆ

**ಗುರೋರನುಗ್ರಹಮೃತೇ ಸಾಧನಂ ನ ಹರೇಃ ಪ್ರಿಯಮ್**

ನಾವು ಮಾಡಿದ ಈ ಅಳಿಲು ಸೇವೆ ಭಗವಂತನಿಗೆ ಪ್ರಿಯವಾಗಿ ಭಗವಂತ ಸಂತುಷ್ಟನಾಗಿ ಅನುಗ್ರಹಿಸಬೇಕಾದರೆ ಗುರ್ವನುಗ್ರಹವೇ ಮುಖ್ಯಕಾರಣ. ಕಾರಣ ಈ ಸೇವೆಯನ್ನು ಗುರುಗಳು ಹಾಗು ತದಂತರ್ಯಾಮಿ, ಪರಮಗುರುಗಳು ತದಂತರ್ಯಾಮಿ, ಶ್ರೀಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥಶ್ರೀಪಾದಾದಿ ಸಮಸ್ತ ಗುರುಗಳು ಅವರ ಅಂತರ್ಯಾಮಿಗಳಾದ, ಈ ಗ್ರಂಥದ ಸಕಲ ವ್ಯಾಖ್ಯಾತೃಗಳ ಅಂತರ್ಯಾಮಿಗಳಾದ ತತ್ತ್ವಾಭಿಮಾನಿದೇವತೆಗಳು ಹಾಗು ವರ್ಣಾಭಿಮಾನಿ ದೇವತೆಗಳು ಅವರ ಅಂತರ್ಯಾಮಿಗಳಾದ ಶ್ರೀಮದಾಚಾರ್ಯರು ತದಂತರ್ಯಾಮಿಯಾದ ಪೂರ್ವೋತ್ತರವರ್ಣಸಂಧಿ ಸಂಹಿತಾಗಳಿಂದ ಪ್ರತಿಪಾದ್ಯನಾದ ವರಾಹ ವಾಮನ ನರಸಿಂಹ ರೂಪಗಳಿಂದ ಅಭಿನ್ನರಾದ ಶ್ರೀರಾಮಕೃಷ್ಣವೇದವ್ಯಾಸದೇವರ ಪಾದಪದ್ಮಗಳಲ್ಲಿ ಭಕ್ತಿಶ್ರದ್ಧಾಪೂರ್ವಕ ಸಮರ್ಪಿಸುವೆವು

**ಪ್ರೀತೋಽಸಿ ಮಾಪತೇ ವ್ಯಾಸ ಯದಿ ಕೇನಾಽಪಿ ಕರ್ಮಣಾ ।**
**ಕುರು ಮಾಂ ಮಧ್ವಶಾಸ್ತ್ರಸ್ಯ ಸದಾವೃತ್ತಿರತಂ ಪ್ರಭೋ ॥**
**ಅನೇನ ಭಾವಿ ಯತ್ ಪುಣ್ಯಂ ಅವಾಪ್ನೋತು ಗುರುರ್ಮಮ ॥**

## ಪ್ರಕಾಶಕರ ನುಡಿ

ಶ್ರೀಮದಾಚಾರ್ಯರ ಮಹಾಕೃತಿ ಮಹಾಭಾರತತಾತ್ಪರ್ಯನಿರ್ಣಯ. ಅದರ ಮಹತಿಯನ್ನು ಮಹಾನುಭಾವರೇ ಬಲ್ಲರು. ಅದರಲ್ಲಡಗಿರುವ ಪ್ರಮೇಯರಾಶಿಗಳನ್ನು ಜಗತ್ತಿಗೆ ತೋರಿಸುವುದಕ್ಕಾಗಿಯೇ ಅನೇಕ ಜ್ಞಾನಿಗಳು ಇದರ ವ್ಯಾಖ್ಯಾನವನ್ನು ಮಾಡಿ ನಮ್ಮೆಲ್ಲರಿಗೂ ಪರಮೋಪಕಾರ ಮಾಡಿದ್ದಾರೆ. ಅವುಗಳಲ್ಲಿ ಉಪಲಬ್ಧವಾದ 15 ವ್ಯಾಖ್ಯಾನಗಳಸಹಿತವಾಗಿ ತಾತ್ಪರ್ಯನಿರ್ಣಯದ 18 ರಿಂದ 21 ಅಧ್ಯಾಯದ ವರೆಗಿನ ಈ ಚತುರ್ಥಭಾಗವನ್ನು ಸಾರಸ್ವತಲೋಕಕ್ಕೆ ಸಮರ್ಪಿಸಲು ಪರಿಷತ್ತು ಹರ್ಷಪಡುತ್ತಿದೆ. ಈಗಾಗಲೇ ಮೂರು ಭಾಗಗಳು ಪ್ರಕಾಶಿತವಾಗಿದ್ದು ವಿಮರ್ಶಕರ ವಿದ್ವಾಂಸರ ವಿಶೇಷ ಮನ್ನಣೆಗೆ ಪಾತ್ರವಾಗಿವೆ.

ಪರಿಷತ್ತಿನ ಹೆಮ್ಮೆಯ ಪ್ರಕಾಶನಗಳಲ್ಲೊಂದಾದ ಈ ಕೃತಿ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಾತ್ಮತೀರ್ಥರ ಪರಮಾನುಗ್ರಹ ಹಾಗು ಸಂಪಾದಕರಾದ ಪಂ. ಶ್ರೀನಿವಾಸತೀರ್ಥಾಚಾರ್ಯ ಪಂ. ಜಯತೀರ್ಥಾಚಾರ್ಯ ಪಂ. ವೇದವ್ಯಾಸಾಚಾರ್ಯ ಇಟಗಿ ಇವರ ನಿರಂತರ ಪರಿಶ್ರಮದಿಂದ ಸಿದ್ಧವಾಗಿದೆ. ಅನೇಕ ಪ್ರಾಚೀನ ಹಸ್ತಪ್ರತಿಗಳನ್ನು ಸಂಶೋಧಿಸಿ ಗ್ರಂಥದ ಸಂಪಾದನೆಯನ್ನು ಮಾಡಿದ್ದಾರೆ. ಶ್ರೀಮದಾಚಾರ್ಯರ ವಾಕ್ಯಗಳಿಗೆ, ಪ್ರಮೇಯಗಳಿಗೆ ಸಂವಾದಿಯಾಗುವ ಅವುಗಳನ್ನು ಸಮರ್ಥನೆ ಮಾಡುವ ಪ್ರಮಾಣಗಳನ್ನು ಯುಕ್ತಿಗಳನ್ನು ನಾನಾ ಮೂಲ ಆಕರಗಳಿಂದ ಸಂಗ್ರಹಿಸಿ ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಅದರ ಹಿಂದೆ ಅವರು ಪಟ್ಟ ಪರಿಶ್ರಮ ಇದು ವಿದ್ವಾಂಸರಿಗೇ ಗೋಚರಿಸುವಂಥದ್ದು. ಅಂತೂ ಈ ಮೂರು ಜನ ವಿದ್ವಾಂಸರ ವಿಶೇಷ ಪರಿಶ್ರಮದಿಂದ ಒಂದು ಮಹತ್ತರವಾದ ಕೃತಿ ಪರಿಷತ್ತನಿಂದ ಹೊರಬರುತ್ತಿದೆ. ಅದಕ್ಕಾಗಿ ಪರಿಷತ್ತು ಅವರಿಗೆ ಆಭಾರಿಯಾಗಿದೆ.

ಈ ಗ್ರಂಥದ ಪ್ರಕಾಶನಕ್ಕೆ ಮೂಲ ಕಾರಣರಾದವರು ಪರಮಪೂಜ್ಯ ಪ್ರಾತಸ್ಮರಣೀಯರಾದ ಶ್ರೀ ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು. ಅವರು ನಿರಂತರ ಪರಿಶ್ರಮದಿಂದ ಈ ವ್ಯಾಖ್ಯಾನಗಳನ್ನು ಸಂಗ್ರಹಿಸದೇ ಹೋಗಿದ್ದರೆ ಈ ಕೃತಿ ಅಷ್ಟೇ ಅಲ್ಲ ಪರಿಷತ್ತಿನಿಂದ ಪ್ರಕಾಶಿತವಾದ ಅಪರೂಪದ ಯಾವ ಕೃತಿಗಳೂ ಜಿಜ್ಞಾಸುಗಳ ಕೈಸೇರುತ್ತಿರಲಿಲ್ಲ. ಅದಕ್ಕಾಗಿ ಆ ಮಹಾನುಭಾವರ ಉಪಕಾರವನ್ನು ಎಷ್ಟು ಸ್ಮರಣೆ ಮಾಡಿದರೂ ಸಾಲದು. ಪ್ರತಿಯೊಬ್ಬ ವಿದ್ವಾಂಸರೂ ಜಿಜ್ಞಾಸುಗಳೂ ಅವರಿಗೆ ಚಿರಋಣಿಗಳಾಗಿದ್ದಾರೆ. ಅಂತಹ ಮಹಾಚೇತನದ ಅಡಿದಾವರೆಗಳಲ್ಲಿ ಅನಂತ ಶಿರಸಾಷ್ಟಾಂಗ ನಮಸ್ಕಾರಗಳು.

ಈ ಗ್ರಂಥಪ್ರಕಾಶನಕ್ಕೆ ಮೂಲಪ್ರೇರಣೆ ಪರಮಪೂಜ್ಯ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು. ಪ್ರಾತಃಸ್ಮರಣೀಯರಾದ ಶ್ರೀ ಸತ್ಯಪ್ರಮೋದತೀರ್ಥರು ಸಂಗ್ರಹಿಸಿದ, ತಮ್ಮಲ್ಲಿರುವ ಅನೇಕ ಹಸ್ತಪ್ರತಿಗಳನ್ನು ನೀಡುವುದಲ್ಲದೇ ಪ್ರತಿಯೊಂದು ಹಂತದಲ್ಲಿಯೂ ವಿಶೇಷವಾದ ಪ್ರೋತ್ಸಾಹವನ್ನು ನೀಡುತ್ತಾ ಪರಮೋಪಕಾರ ಮಾಡಿದ್ದಾರೆ. ಈ ಮೂಲಕ ಪರಿಷತ್ತಿನ ಸರ್ವತೋಮುಖವಾದ ಬೆಳವಣಿಗೆಗೆ ಮೂಲವಾಗಿದ್ದಾರೆ. ಇಂತಹ ಮಹಾನುಭಾವರ ಅಡಿದಾವರೆಗಳಲ್ಲಿ ಅನಂತ ಶಿರಸಾಷ್ಟಾಂಗಪ್ರಣಾಮಗಳು.

ಈ ಗ್ರಂಥದ ಪ್ರಕಾಶನಕ್ಕೆ ವಿಶಿಷ್ಟವಾಗಿ ಮಾರ್ಗದರ್ಶನ ಮಾಡಿದವರು ಶ್ರೀಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ. ವಿದ್ಯಾಸಿಂಹಾಚಾರ್ಯರು. ಸಂಶೋಧನೆಯ ಹಂತದಲ್ಲಿ ಸುಮಾರು ನಾಲ್ಕು ವರ್ಷಗಳ ವರೆಗೆ ಸಂಶೋಧಕರನ್ನು ವಿದ್ಯಾಪೀಠದಲ್ಲಿಯೇ ಇಟ್ಟುಕೊಂಡು ಎಲ್ಲ ರೀತಿಯಾದ ಅನುಕೂಲಗಳನ್ನು ಮಾಡಿಕೊಡುವುದಲ್ಲದೇ ಅವರಿಗೆ ವಿಶಿಷ್ಟವಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಇಂತಹ ಆಚಾರ್ಯರಿಗೆ ಸಾಷ್ಟಾಂಗಪ್ರಣಾಮಗಳು.

ಈ ಗ್ರಂಥದ ಪ್ರಕಾಶನಕ್ಕೆ ತಮ್ಮ ಸಂಗ್ರಹದಲ್ಲಿಯ ಹಸ್ತಪ್ರತಿಗಳನ್ನು ನೀಡಿದ ಪಂ. ಪ್ರಭಂಜನಾಚಾರ್ಯ, ಪಂ. ಬನ್ನಂಜೆ ಗೋವಿಂದಾಚಾರ್ಯ, ಪಂ. ಜಯತೀರ್ಥಾಚಾರ್ಯ ಮಳಗಿ, ಪಂ. ರಾಮಮೂರ್ತ್ಯಾಚಾರ್ಯ ಪಗಡಾಲ, ಪಂ. ಪ್ರದೀಪಸಿಂಹಾಚಾರ್ಯ ಇವರಿಗೆ ನಮಸ್ಕಾರಗಳು. ಮತ್ತು ಮೈಸೂರ್ ಪ್ರಾಚ್ಯವಿದ್ಯಾಸಂಶೋಧನಾಲಯ, ಮದ್ರಾಸ್ ಪ್ರಾಚ್ಯವಿದ್ಯಾಸಂಶೋಧನಾಲಯಕ್ಕೆ, ಮುದ್ರಣದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ವಾಗರ್ಥಮುದ್ರಣಾಲಯದ ಬಳಗಕ್ಕೂ ಪರಿಷತ್ತು ಆಭಾರಿಯಾಗಿದೆ.

ಈ ಕೃತಿಯ ಲಾಭವನ್ನು ವಿದ್ವಾಂಸರು ಹಾಗೂ ಜಿಜ್ಞಾಸುಗಳು ಪಡೆದಲ್ಲಿ ಪರಿಷತ್ತಿನ ಶ್ರಮ ಸಾರ್ಥಕವಾಗುತ್ತದೆ.

ಪ್ರಧಾನ ಕಾರ್ಯದರ್ಶಿ

**ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ, ಬೆಂಗಳೂರು**

# ಮುನ್ನುಡಿಯುವ ಮುನ್ನ

**ದ್ರೌಪದಿ**

ಮಹಾಭಾರತದ ಆದರ್ಶ ಮಹಿಳೆಯರಲ್ಲಿಯೇ ಶ್ರೇಷ್ಠಳು ದ್ರೌಪದಿ. ಆದರ್ಶ ಮಡದಿ. ಪರಮ ಪತಿವ್ರತೆ. ಅತಿಶಯವಾದ ಕೃಷ್ಣನ ಭಕ್ತಿ. ತೋರಿಕೆಗೆ ಸೇಡಿನಂತೆ ಇದ್ದರೂ ಬಿಡದ ಕರ್ತವ್ಯಪ್ರಜ್ಞೆ. ಕ್ಷತ್ರಧರ್ಮದ ನಿಷ್ಠೆ. ಇವೇ ಮುಂತಾದ ನೂರಾರು ಗುಣಗಳನ್ನು ನಾವು ದ್ರೌಪದಿಯಲ್ಲಿ ನೋಡುತ್ತೇವೆ.

'ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ ।
ಪಂಚಕನ್ಯಾಃ ಸ್ಮರೇನ್ನಿತ್ಯಂ ಮಹಾಪಾತಕನಾಶನಂ ॥'

ಎಂದು ಪುರಾಣದಲ್ಲಿ ಕನ್ಯೆಯಂತೆ ಅತ್ಯಂತ ಶುದ್ಧರಾದ ಪಂಚ ಪತಿವ್ರತೆಯರನ್ನು ಹೆಸರಿಸಿದ್ದಾರೆ. ಇವರಲ್ಲಿ ಸೀತೆಯ ನಂತರ ಶ್ರೇಷ್ಠಳು ದ್ರೌಪದಿ. ಅಯೋನಿಜೆ. ಅನಲ ಕುವರಿ. ಸರ್ವಲಕ್ಷಣಗಳಿಂದ ಸಂಪನ್ನೆ, ಅತ್ಯಂತ ರೂಪವಂತೆ. ನಡೆದಾಡುವಾಗ ಎಂದೂ ಭೂಮಿಯನ್ನು ಮುಟ್ಟದವಳು. ದೇಹದಿಂದ ಸದಾಕಾಲದಲ್ಲಿ ಕಮಲಸುವಾಸನೆ ಸೂಸುತ್ತಾ ತನ್ನ ದಿವ್ಯತೆಯನ್ನು ಸಾರುವವಳು. ಐದು ಜನರನ್ನು ಮದುವೆಯಾದರೂ ಮಹಾಪತಿವ್ರತಾಶಿರೋಮಣಿ. ಶಾಪಾನುಗ್ರಹ ಸಮರ್ಥಳು. ಆದರೂ ಕ್ಷಮಾಮೂರ್ತಿ. ಏನೇ ಕಷ್ಟ ಬಂದರೂ ಸಿಟ್ಟಿನಿಂದ ಯಾರನ್ನೂ ಶಪಿಸಲಿಲ್ಲ. ಆದರೆ ಅನ್ಯಾಯದ ವಿರುದ್ಧ ಹೋರಾಟ ನಿಲ್ಲಿಸಲಿಲ್ಲ. ತಪ್ಪಿಗೆ ತಕ್ಕ ಶಾಸ್ತಿ ಆಗದೆ ಇರಲು ಬಿಡಲಿಲ್ಲ. ಇದು ದ್ರೌಪದಿಯ ಕೆಲವು ಮಹಾಗುಣಗಳು.

ಶ್ರೀಮದಾನಂದತೀರ್ಥಭಗತ್ಪಾದರ ದೃಷ್ಟಿಯಲ್ಲಿ ದ್ರೌಪದಿ ಜೀವರಲ್ಲಿ ಅತ್ಯುತ್ತಮ ಸ್ತ್ರೀ. ರಮೆಯ ನಂತರ ಇವಳದೇ ಹಿರಿಮೆ. ಜೀವೋತ್ತಮರಾದ ವಾಯುದೇವರ ಮಡದಿ. ಯಾವುದೇ ದೋಷವಿಲ್ಲದವಳು. ಅನಾದಿಯಾದ ಸಂಸಾರದಲ್ಲಿ ಯಾವ ಅಪರಾಧವನ್ನು ಮಾಡದವಳು. ಪರಶುಕ್ಲತ್ರಯರಲ್ಲಿ ಒಬ್ಬಳು. ಅನಾದಿಯಿಂದ ಪರಮಾತ್ಮನ ಪರೋಕ್ಷಜ್ಞಾನ ಪರಿಪೂರ್ಣವಿರುವವಳು. ವಿಶೇಷವಾಗಿ ಪರಮಾತ್ಮನ ಅಚ್ಚಿನ್ನ ಭಕ್ತನಾದ ಭೀಮನ ಮನಸ್ಸನ್ನು ಅರಿತು ಅದರಂತೆ ನಡೆಯುವವಳು. ಹುಟ್ಟುವಾಗಲೇ ಸರ್ವಜ್ಞಳು. ಹರಿಯನ್ನು ಪತಿಯನ್ನು ಬಿಟ್ಟು ಮತ್ತೊಬ್ಬರಲ್ಲಿ ದೇಹಿ ಎಂದು ಎಂದೂ ಯಾರನ್ನೂ ಬೇಡಿಲ್ಲ. ಬೇಡುವುದಿಲ್ಲ. ಗುರುಭಕ್ತಿಸ್ವರೂಪಳು. ಹೀಗೆ ಅನೇಕ ಗುಣಗಣಗಳಿಂದ ಕೂಡಿದ ದ್ರೌಪದಿಯ ಬಗ್ಗೆ ಆಕೆಯ ಜನ್ಮದ ಹಿಂದೆ ಇರುವ ಮಹತ್ತರವಾದ ಕಾರಣದ ಬಗ್ಗೆ, ಪಂಚಪತಿತ್ವದ ಬಗ್ಗೆ ನಿರ್ಣಯವನ್ನು ಶ್ರೀಮದಾಚಾರ್ಯರು ಮಹಾಭಾರತತಾತ್ಪರ್ಯನಿರ್ಣಯದ ೧೮ ನೇ ಮತ್ತು ೧೯ ಅಧ್ಯಾಯದಲ್ಲಿ ಮಾಡಿದ್ದಾರೆ.

**ದ್ರೌಪದಿ ಯಾರು ?**

ದ್ರೌಪದಿ ಯಾರು ಎನ್ನುವ ಬಗ್ಗೆ ಮಹಾಭಾರತ ಹಾಗು ಪುರಾಣಗಳಲ್ಲಿ ನಾನಾ ರೀತಿಯಾಗಿ ನಿರೂಪಣೆಯನ್ನು ಕಾಣುತ್ತೇವೆ. ಅವುಗಳನ್ನು ನೋಡಿದಾಗ ನಮಗೆ ದ್ರೌಪದಿಯ ಬಗ್ಗೆ ಗೊಂದಲವೇ ಹೆಚ್ಚಾಗುತ್ತದೆ. ಇದಮಿತ್ಥಂ ಎಂದು ನಿರ್ಣಯವಾಗುವುದಿಲ್ಲ.

ಸಾಮಾನ್ಯವಾಗಿ ಜಗತ್ತಿನಲ್ಲಿ ಒಬ್ಬ ಹೆಂಗಸಿಗೆ ಒಬ್ಬ ಪತಿ ಇರುವುದು ರೂಢಿಯಲ್ಲಿದೆ.

ವೇದದಲ್ಲಿಯೂ ಕೂಡ 'ತಸ್ಮಾತ್ ಏಕಸ್ಯ ಬಹ್ವ್ಯಃ ಜಾಯಾ ಭವಂತಿ ನೈಕಸ್ಯೈ ಬಹವಃ ಸಹ ಪತಯಃ' (ಐ.ಬ್ರಾ.೩.೨೩) ಎಂದು ಇದೆ. ಒಬ್ಬ ಗಂಡಿಗೆ ಅನೇಕ ಹೆಂಡತಿಯರು ಇರಬಹುದು. ಆದರೆ ಒಬ್ಬ ಹೆಣ್ಣಿಗೆ

ಒಬ್ಬನೇ ಪತಿಯೆಂದು ಹೇಳಿದೆ. 'ತಸ್ಮಾನ್ನೈಕಾ ದ್ವೌಪತೀ ವಿಂದತೇ' ಎಂದು (ತೈತ್ತಿರೀಯಸಂಹಿತಾ.೬.೬.೪.೩) ಹೇಳಿದೆ. ಇದೇ ರೀತಿಯಾಗಿ 'ನೈಕಾ ಬಹೂನ್ ಪತೀನ್' (ಕಾಠಕಸಂಹಿತಾ.೨೯.೮) ಎಂದು ವಾಕ್ಯವನ್ನು ನೋಡಬಹುದು. ಇದನ್ನು ಪ್ರತಿಪಾದನೆ ಮಾಡುವುದಕ್ಕೆ ವೇದವೇ ಶ್ರೌತಯಾಗದ ದೃಷ್ಟಾಂತವನ್ನು ಹೇಳುತ್ತದೆ. ಒಂದು ಯೂಪಕ್ಕೆ (ಯಾಜ್ಞೀಯ ಕಂಬ) ಎರಡು ಹಗ್ಗಗಳನ್ನು ಕಟ್ಟಬಹುದು. ಆದರೆ ಒಂದು ಹಗ್ಗವನ್ನು ಎರಡು ಯೂಪಕ್ಕೆ ಕಟ್ಟಲು ಬರುವದಿಲ್ಲ. ಹಾಗೆ ಒಬ್ಬ ಗಂಡಸು ಅನೇಕ ಜನರನ್ನು ವಿವಾಹ ಆಗಬಹುದು. ಆದರೆ ಒಬ್ಬ ಹೆಣ್ಣು ಒಂದು ಗಂಡನ್ನೇ ವಿವಾಹವಾಗಬೇಕು.

ಅದರಂತೆ 'ನ ದ್ವಿತೀಯೋ ಹಿ ಸಾಧ್ವೀನಾಂ ಕ್ವಚಿದ್ ಭರ್ತೋಪದಿಷ್ಯತೇ' ಎಂದು ಸ್ಮೃತಿ ಇದೆ. ಹೆಣ್ಣು ಮಕ್ಕಳಿಗೆ ಎಂದೂ ಎರಡನೇ ಗಂಡ ಇರಲು ಸಾಧ್ಯವಿಲ್ಲ. ಹಾಗಾದರೆ ಹೆಂಗಸರಿಗೆ ಎಂದೂ ಇಬ್ಬರು ಗಂಡಂದಿರು ಇಲ್ಲವಾದರೆ ಐತರೇಯ ಬ್ರಾಹ್ಮಣದಲ್ಲಿ 'ಸಹ' ಎಂಬ ಶಬ್ದವನ್ನು ಏಕೆ ಪ್ರಯೋಗ ಮಾಡಿದ್ದಾರೆ ಎಂದರೆ ಇದಕ್ಕೆ ಧರ್ಮಶಾಸ್ತ್ರದಲ್ಲಿ ಹೀಗೆ ಹೇಳುತ್ತಾರೆ. 'ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇ ಪತೌ। ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥' ಎಂದು ಹೇಳಿದ್ದಾರೆ. ವಾಗ್ದಾನ ಮಾಡಿದ ಮೇಲೆ ಸಪ್ತಪದಿ ಆಗುವದಕ್ಕೂ ಮೊದಲು ನಿಶ್ಚಿತನಾದ ವರ ಯಾರಿಗೂ ತಿಳಿಯದೆ ದೇಶಾಂತರಕ್ಕೆ ಹೋದರೆ, ಸತ್ತರೆ, ಸನ್ಯಾಸಿ ಆದರೆ, ನಪುಂಸಕ ಎಂದು ತಿಳಿದರೆ, ಪತಿತನಾದರೆ, ಆಗ ಕನ್ಯೆಯನ್ನು ಇನ್ನೊಬ್ಬರಿಗೆ ಕೊಟ್ಟು ವಿವಾಹ ಮಾಡಲು ಬರುತ್ತದೆ. ಈ ಅಭಿಪ್ರಾಯದಿಂದ ಸಹ ಎಂಬ ಪದವಿದೆ. ಇಂಥ ಸಂದರ್ಭದಲ್ಲಿ ಮಾತ್ರ ಕನ್ಯೆಯನ್ನು ಇನ್ನೊಬ್ಬರಿಗೆ ಕೊಡಬಹುದು ಹೊರತು ಏಕಕಾಲದಲ್ಲಿ ಒಬ್ಬ ಕನ್ಯೆಗೆ ಇಬ್ಬರು ಪತಿಗಳು ಇರಬಾರದು ಎನ್ನುವುದು ಶ್ರುತಿಯ ಅಭಿಪ್ರಾಯ.

ಹೀಗಿರುವಾಗ ಒಬ್ಬ ದ್ರೌಪದಿಯನ್ನು ಐವರಿಗೆ ಮದುವೆ ಮಾಡುವುದು ಮೇಲುನೋಟಕ್ಕೆ ಲೋಕವೇದವಿರುದ್ಧವಾಗಿದೆ. ಒಬ್ಬಳಿಗೆ ಐವರು ಗಂಡಂದಿರು. ಒಬ್ಬ ಗಂಡನ ಮನಸ್ಸು ಒಲಿಸಿ ಪತಿವ್ರತೆ ಆಗುವುದೆ ಅಪರೂಪವಿರುವಾಗ, ಪಾಂಚಾಲಿದೇವಿ ಐವರು ಗಂಡರನ್ನು ಒಲಿಸಿ ಅವರ ಮನಸ್ಸಿನಂತೆ ನಡೆದು ಪರಮ ಪತಿವ್ರತೆ ಎಂದು ಜ್ಞಾನಿಗಳಿಗೆ ಹಾಗು ವೇದವ್ಯಾಸದೇವರಿಗೆ ಸಮ್ಮತಳಾದಳು. ಇದು ಜಗತ್ತಿಗೆ ಅರಿವಾಗದ ಸಂಗತಿ. ಇದನ್ನು ಮಹಾಭಾರತದಲ್ಲಿ ಭಗವಾನ್ ಕೃಷ್ಣದ್ವೈಪಾಯನರು ನಿರೂಪಿಸಿದ್ದಾರೆ. ಆದರೇನು ಆ ಗಂಭೀರವಾದ ವಾಣಿಯ ಅರ್ಥ ವಿವರಣೆ, ಎಲ್ಲರ ಮನಸ್ಸಿಗೆ ಹಿಡಿಸುವಂತೆ ನಿರೂಪಿಸುವುದು ವಾಣಿಪತಿಗಳಾದ ವಾಯುದೇವರಿಗೆ ಅಲ್ಲದೆ ಮತ್ಯಾರಿಗೆ ಸಾಧ್ಯವೇ? ಅದನ್ನು ಭಾವಿಸಮೀರರಾದ ಶ್ರೀಮದಾನಂದತೀರ್ಥರು ಈ ಗ್ರಂಥದಲ್ಲಿ ನಿರೂಪಣೆ ಮಾಡಿದ್ದಾರೆ.

ಈ ಎಲ್ಲಾ ಗೊಂದಲ ಪರಿಹಾರಕ್ಕಾಗಿ ಶ್ರೀಮದಾಚಾರ್ಯರ ನಿರ್ಣಯ ಎಷ್ಟು ಆವಶ್ಯಕ ಎಂದು ಸ್ವಲ್ಪ ಆಲೋಚಿಸೋಣ. ದ್ರೌಪದಿ ಯಾರು ಎನ್ನುವುದಕ್ಕೆ ಉತ್ತರವನ್ನು ನಮಗೆ ಸಿಕ್ಕ ಮಹಾಭಾರತಾದಿ ಗ್ರಂಥಗಳ ನೆರಳಲ್ಲಿ ನೋಡಲು ಯತ್ನಿಸೋಣ.

**ಮಹಾಭಾರತ** ೧. ದ್ರೌಪದಿ ತ್ವಥ ಸಂಜಜ್ಞೇ ಶಚೀಭಾಗಾದನಿಂದಿತಾ ।
ದ್ರುಪದಸ್ಯ ಕುಲೇ ಜಾತಾ ವೇದಿಮಧ್ಯಾದನಿಂದಿತಾ ॥ ಆದಿ. ೬೮.೧೫೭.

ಈ ಮೇಲಿನ ಶ್ಲೋಕದಲ್ಲಿ ದ್ರೌಪದಿ ಶಚೀದೇವಿಯ ಅವತಾರ ಎಂದು ಹೇಳಿದ್ದಾರೆ.

೨. ಆಸೀತ್ ತಪೋವನೇ ಕಾಚಿದ್ ಋಷೇಃ ಕನ್ಯಾ ಮಹಾತ್ಮನಃ ।
ವಿಲಗ್ನಮಧ್ಯಾ ಸುಶ್ರೋಣೀ ಸುಭ್ರೂಃ ಸರ್ವಗುಣಾನ್ವಿತಾ ॥ .....

ದ್ರುಪದಸ್ಯ ಕುಲೇ ಜಜ್ಞೇ ಸಾ ಕನ್ಯಾ ದೇವರೂಪಿಣೀ ।
ನಿರ್ದಿಷ್ಟಾ ಭವತಾಂ ಪತ್ನೀ ಕೃಷ್ಣಾ ಪಾರ್ಷತ್ಯನಿಂದಿತಾ ॥ ಆದಿ.೧೮೪.೬,೧೪

ಈ ಮೇಲಿನ ಶ್ಲೋಕಗಳ ಪ್ರಕಾರ ದ್ರೌಪದಿ ಒಬ್ಬ ಋಷಿ ಕನ್ಯೆ . ಋಷಿ ಕನ್ಯೆ ಒಬ್ಬಳು ತಪಸ್ಸು ಮಾಡಿ ಐದು ಪತಿಗಳನ್ನು ರುದ್ರದೇವರಿಂದ ವರವನ್ನಾಗಿ ಪಡೆದಿದ್ದಾಳೆ. ಇನಳು ನಿಮ್ಮ ಹೆಂಡತಿ ಎನ್ನುವ ವೇದವ್ಯಾಸದೇವರ ಮಾತು ಇದೆ. ಅವಳೇ ದ್ರೌಪದಿ. ಪೂರ್ವಜನ್ಮದಲ್ಲಿ ಋಷಿ ಕನ್ಯಾ ಎಂದಿದ್ದಾರೆ.

೩. ಏಷಾ ನಾಲಾಯನೀ ಪೂರ್ವಂ ಮೌದ್ಗಲ್ಯಂ ಸ್ಥವಿರಂ ಪತಿಮ್ ।
ಆರಾಧಯಾಮಾಸ ತದಾ ಕುಷ್ಠಿನಂ ತಮನಿಂದಿತಾ ॥ .....
ಸಾ ವೈ ನಾಲಾಯಾನೀ ಜಜ್ಞೇ ದೈವಯೋಗೇನ ಕೇನಚಿತ್ ।
ರಾಜಂಸ್ತವಾತ್ಮಜಾ ಕೃಷ್ಣಾ ವೇದ್ಯಾಂ ತೇಜಸ್ವಿನೀ ಶುಭಾ ॥ ಆದಿ.೨೧೨.೪,೨೬

ಈ ಮೇಲಿನ ಶ್ಲೋಕಗಳ ಪ್ರಕಾರ ನಳನ ಮಗಳಾದ ಇಂದ್ರಸೇನಾ ದ್ರೌಪದಿ. ನಳನ ಮಗಳು ಇಂದ್ರಸೇನಾ ಮೌದ್ಗಲ್ಯ ಋಷಿಗಳ ಮಡದಿ. ಆಕೆ ತನ್ನ ಪತಿಯ ಸೇವೆಯನ್ನು ಚೆನ್ನಾಗಿ ಮಾಡಿದಳು. ಆಕೆಯೇ ತಪಸ್ಸು ಮಾಡಿ ದ್ರೌಪದಿ ಆಗಿದ್ದಾಳೆ ಎಂದು ನಿರೂಪಣೆ ಮಾಡಿದ್ದಾರೆ.

೪. ತೇಷಾಂ ಕಾಮಂ ಭಗವಾನುಗ್ರಧನ್ವಾ ಪ್ರಾದಾದಿಷ್ಟಂ ಸನ್ನಿಸರ್ಗಾದ್ಯಥೋಕ್ತಮ್ ।
ತಾಂ ಚಾಪ್ಯೇಷಾಂ ಯೋಷಿತಂ ಲೋಕಕಾಂತಾಂ ಶ್ರಿಯಂ ಭಾರ್ಯಾಂ ವ್ಯದಧಾನ್ಮಾನುಷೇಷು ॥ ಆದಿ.೨೧೪.೩೦
ಶ್ರೀರೇಷಾ ದ್ರೌಪದೀರೂಪಾ ತ್ವದರ್ಥೇ ಮಾನುಷಂ ಗತಾ ।
ಅಯೋನಿಜಾ ಲೋಕಕಾಂತಾ ಪುಣ್ಯಗಂಧಾ ಯುಧಿಷ್ಠಿರ ॥ ಸ್ವರ್ಗಾರೋಹಣ. ೪.೧೨

ಈ ಶ್ಲೋಕಗಳ ಪ್ರಕಾರ ಸ್ವರ್ಗದ ಶ್ರೀ ದ್ರೌಪದಿಯಾಗಿ ಹುಟ್ಟಿದ್ದಾಳೆ.

ಆದಿಪರ್ವದಲ್ಲಿ ಪಂಚೇಂದ್ರರು ಕೇಳಿದ ವರವನ್ನು ರುದ್ರದೇವರು ಅನುಗ್ರಹಿಸಿದರು. ಅದರಂತೆ ಸುಂದರಳಾದ 'ಶ್ರೀ' ಅನ್ನು ಅವರ ಪತ್ನಿಯನ್ನಾಗಿಯು ವ್ಯವಸ್ಥೆ ಮಾಡಿದರು.

ಸ್ವರ್ಗಾರೋಹಣಪರ್ವದಲ್ಲಿ ಇಂದ್ರದೇವರು ಧರ್ಮರಾಜನಿಗೆ ಹೇಳುತ್ತಾರೆ. 'ಅಯೋನಿಜಳಾದ, ಅತ್ಯಂತ ಸುಂದರಳಾದ, ಪುಣ್ಯಗಂಧಯಾರ ಮೈಯಿಂದ ಸೂಸುತ್ತದೋ ಅಂಥಹ 'ಶ್ರೀ' ನಿಮ್ಮಗಳ ಸಲುವಾಗಿ ದ್ರೌಪದಿಯಾಗಿ ಹುಟ್ಟಿದ್ದಳು' ಎಂದಿದ್ದಾರೆ.

೫.ಏವಮೇತೇ ಪಾಂಡವಾಃ ಸಂಬಭೂವುಃ ಯೇ ತೇ ರಾಜನ್ ಪೂರ್ವಮಿಂದ್ರಾ ಬಭೂವುಃ ।
ಲಕ್ಷ್ಮೀಶ್ಚೈಷಾಂ ಪೂರ್ವಮೇವೋಪದಿಷ್ಟಾ ಭಾರ್ಯಾ ಯೈಷಾ ದ್ರೌಪದೀ ದಿವ್ಯರೂಪಾ ॥ ಆದಿ.೨೧೪.೩೫

ಹಿಂದಿನ ಮನ್ವಂತರಗಳಲ್ಲಿ ಇಂದ್ರರಾದವರೇ ಅವರು ಪಾಂಡವರಾಗಿ ಹುಟ್ಟಿದ್ದಾರೆ. ಅವರ 'ಲಕ್ಷ್ಮೀಯೇ' ಈಗ ದ್ರೌಪದಿಯಾಗಿ ಹುಟ್ಟಿದ್ದಾಳೆ. ಇದರಲ್ಲಿ ಐದು ಪೂರ್ವಮನ್ವಂತರದ ಇಂದ್ರರ 'ಲಕ್ಷ್ಮೀ' ದ್ರೌಪದಿ ಎಂದು ಹೇಳಿದ್ದಾರೆ.

೬. ಶ್ರೀವಾದಿರಾಜತೀರ್ಥರ ಮಹಾಭಾರತದ ಪಾಠಕ್ಕೆ ಅನುಗುಣವಾಗಿ 'ಪಾರ್ವತೀ' ದ್ರೌಪದಿಯಾಗಿದ್ದಾಳೆ.

ದ್ರುಪದ್ಯೈಷಾ ತತೋ ಜಜ್ಞೇ ಸುತಾ ತೇ ದೇವರೂಪಿಣೀ ।
ಪಂಚಾನಾಂ ಸಹಿತಾ ಕೃಷ್ಣಾರೂಪಾ ಪಾರ್ವತ್ಯನಿಂದಿತಾ ॥ ಆದಿ. ೨೧೪.೬೩

ದ್ರುಪದರಾಜನೇ ! ದೇವತೆಗಳ ರೂಪ ಉಳ್ಳ , ಯಾವ ದೋಷಗಳಿಲ್ಲದ, ಪಾರ್ವತಿಯು ಕೃಷ್ಣಾ ಎಂಬ ಹೆಸರಿನಿಂದ ಐದು ಜನ ಪಾಂಡವರ ಸಲುವಾಗಿ ಅವತರಿಸಿದ್ದಾಳೆ.

೭. ಉಮಾಪಿ ಚ ಜಗದ್ಧಾತ್ರೀ ದ್ರುಪದಸ್ಯ ಮಹೀಭುಜಃ ।
ಯಜತೋ ವಹ್ನಿಕುಂಡಾಚ್ಚ ಪ್ರಾದುಶ್ಚಕ್ರೇಽತಿಸುಂದರೀ ॥ ಸ್ಕಾಂದಪುರಾಣ.ಕಾಶೀಖಂಡ.೪೯.೪

ಸ್ಕಾಂದಪುರಾಣದಲ್ಲಿ 'ಉಮಾದೇವಿ' ದ್ರೌಪದಿ ಆಗಿ ಯಜ್ಞಕುಂಡದಿಂದ ಬಂದಿದ್ದು ಎಂದು ಹೇಳಿದ್ದಾರೆ.

ಜಗತ್ತನ್ನು ಧಾರಣೆ ಮಾಡುವ ಉಮಾದೇವಿ ದ್ರುಪದ ರಾಜನು ಯಜ್ಞ ಮಾಡುತ್ತಿರುವಾಗ ಯಜ್ಞಕುಂಡದಿಂದ ಪ್ರಾದುರ್ಭೂತಳಾದಳು.

೮. ಮಾರ್ಕಂಡೇಯ ಪುರಾಣದಲ್ಲಿ - ಇಂದ್ರದೇವರ ಮಡದಿಯಾದ ಶಚೀದೇವಿ ದ್ರೌಪದಿಯಾಗಿ ಹುಟ್ಟಿದ್ದಾಳೆ ಎಂದಿದೆ.

ಇಂದ್ರದೇವರು ವಿಶ್ವರೂಪಾಚಾರ್ಯರನ್ನು ಸಂಹಾರ ಮಾಡಿದಾಗ ಇಂದ್ರದೇವರ ದೇಹದಿಂದ ಧರ್ಮಾಂಶ ಧರ್ಮರಾಜನನ್ನು ಸೇರಿತು. ಇಂದ್ರದೇವರು ವೃತ್ರಾಸುರನನ್ನು ಹತ್ಯೆ ಮಾಡಿದಾಗ ಅವರ ಬಲ ವಾಯುದೇವರನ್ನು ಸೇರಿತು. ಇಂದ್ರದೇವರು ಅಹಲ್ಯಾಧರ್ಷಣ ಮಾಡಿದಾಗ ಅವರ ರೂಪ ಲಾವಣ್ಯಗಳು ಅಶ್ವಿನೀದೇವತೆಗಳನ್ನು ಸೇರಿ ಕೊಂಡಿತು. ಇಂದ್ರದೇವರ ಈ ಅಂಶಗಳೇ ಧರ್ಮರಾಜ, ಭೀಮಸೇನ, ನಕುಲ ಹಾಗು ಸಹದೇವರಾಗಿ ಹುಟ್ಟಿದರು. ಇಂದ್ರದೇವರು ತಾವೇ ಅರ್ಜುನನಾಗಿ ಅವತಾರ ಮಾಡಿದರು. ಆದ್ದರಿಂದ ಪಂಚ ಪಾಂಡವರು ಅಂದರೆ ಇಂದ್ರದೇವರ ಐದು ರೂಪಗಳೇ. ಈ ಇಂದ್ರದೇವರಿಗಾಗಿ ಅವರ ಪತ್ನಿ ಶಚಿಯೇ ದ್ರೌಪದಿಯಾಗಿ ಯಜ್ಞಕುಂಡದಿಂದ ಎದ್ದು ಬಂದಳು.

ಪಂಚಧಾ ಭಗವಾನಿತ್ಥಂ ಅವತೀರ್ಣಃ ಶತಕ್ರತುಃ ।
ತಸ್ಯೋತ್ಪನ್ನಾ ಮಹಾಭಾಗಾ ಪತ್ನೀ ಕೃಷ್ಣಾ ಹುತಾಶನಾತ್ ।
ಶಕ್ರಸ್ಯೈಕಸ್ಯ ಸಾ ಪತ್ನೀ ಕೃಷ್ಣಾ ನಾನ್ಯಸ್ಯ ಕಸ್ಯಚಿತ್ ।
ಯೋಗೀಶ್ವರಾ ಶರೀರಾಣಿ ಕುರ್ವಂತಿ ಬಹುಲಾನ್ಯಪಿ ॥
ಪಂಚಾನಾಮೇಕಪತ್ನೀತ್ವಮಿತ್ಯೇತತ್ ಕಥಿತಂ ತವ ॥ ಮಾರ್ಕಂಡೇಯಪುರಾಣ. ೫.೨೩-೨೬

೯. ಬ್ರಹ್ಮವೈವರ್ತಪುರಾಣದ ''ಶ್ರೀಕೃಷ್ಣಜನ್ಮಖಂಡ'' ಇದರಲ್ಲಿ ಸೀತಾಛಾಯಾ ದ್ರೌಪದಿಯಾಗಿ ಹುಟ್ಟಿದ್ದಾಳೆ ಎಂದು ಹೇಳುತ್ತಾರೆ.

ಇದರಲ್ಲಿ ಮೇಲೆ ಹೇಳಿದಕ್ಕೆ ವಿಭಿನ್ನವಾಗಿ ವೇದವ್ಯಾಸದೇವರು ನಿರೂಪಣೆಯನ್ನು ಮಾಡುತ್ತಾರೆ. ಪ್ರಾಯಃ ದೇವಿ ಭಾಗವತದಲ್ಲಿಯೂ ಇದೇ ರೀತಿಯಾಗಿ ನಿರೂಪಣೆಯನ್ನು ಮಾಡಿದ್ದಾರೆ. ಶ್ರೀರಾಮದೇವರ ಪತ್ನಿಯಾದ ಸೀತಾದೇವಿಯನ್ನು ರಾವಣ ಅಪಹಾರ ಮಾಡಲು ಆಲೋಚಿಸುತ್ತಾನೆ. ಇದನ್ನು ತಿಳಿದ ಅಗ್ನಿದೇವರು ರಾಮನ ಅಪ್ಪಣೆಯನ್ನು ಪಡೆದು ಸೀತಾದೇವಿಯ ಛಾಯಾವನ್ನು ರಾಮನ ಬಳಿ ಬಿಟ್ಟು ಸೀತೆಯನ್ನು ತನ್ನ ಲೋಕಕ್ಕೆ ಕರೆದೊಯ್ಯುತ್ತಾರೆ. ರಾವಣನ ಸಂಹಾರ ನಂತರ ನಿಜ ಸೀತಾಳನ್ನು ರಾಮನಿಗೆ ಒಪ್ಪಿಸುತ್ತಾನೆ. ನಂತರ ಸೀತಾಛಾಯಾ ಶಂಕರನನ್ನು ಕುರಿತು ಘೋರ ತಪಸ್ಸನ್ನು ಮಾಡುತ್ತಾಳೆ. ದೇವಿಭಾಗವತಾನುಸಾರವಾಗಿ ಇದೇ ಸಮಯಕ್ಕೆ ಮಾಯಾ ಸೀತೆಗೆ ಸ್ವರ್ಗಲಕ್ಷ್ಮಿ ಪದವಿ ದೊರೆಯುತ್ತದೆ. ರುದ್ರದೇವರಿಂದ ಐದು ಜನ ಗಂಡಂದಿರನ್ನು ವರವನ್ನಾಗಿ ಪಡೆಯುತ್ತಾಳೆ. ಅವಳೇ ಇಲ್ಲಿ ದ್ರೌಪದಿಯಾಗಿ

ಹುಟ್ಟಿದ್ದಾಳೆ. ಕೃತಯುಗದಲ್ಲಿ ವೇದವತಿ, ತ್ರೇತಾದಲ್ಲಿ ಸೀತಾ, ಅವಳೇ ದ್ವಾಪರದಲ್ಲಿ ದ್ರೌಪದಿ ಆಗಿದ್ದಾಳೆ ಎಂದು ಈ ಪುರಾಣ ಹೇಳುತ್ತದೆ.

> ಸಾ ಚ ಛಾಯಾ ದ್ರೌಪದೀ ಚ ಯಜ್ಞಕುಂಡಸಮುದ್ಭವಾ ।
> ಕೃತೇ ಯುಗೇ ವೇದವತೀ ತ್ರೇತಾಯಾಂ ಜನಕಾತ್ಮಜಾ ॥
> ದ್ವಾಪರೇ ದ್ರೌಪದೀ ಛಾಯಾ ತೇನ ಕೃಷ್ಣಾ ತ್ರಿಹಾಯನೀ ॥ ಬ್ರ.ವೈವರ್ತ-ಶ್ರೀಕೃಷ್ಣ.ಖಂ.೧೧೫

೧೦. ಬೃಹನ್ನಾರದೀಯ ಪುರಾಣಾಂತರ್ಗತವಾದ ''ಅಧಿಕ ಮಾಸ ಮಾಹಾತ್ಮ್ಯೆ'' ಇದರಲ್ಲಿ ಋಷಿ ಪುತ್ರಿ ದ್ರೌಪದಿಯಾಗಿ ಹುಟ್ಟುತ್ತಾಳೆ ಎಂದು ಹೇಳಿದ್ದಾರೆ.

ಅಧಿಕ ಮಾಸ ಮಾಹಾತ್ಮ್ಯೆಯ ೮ ನೇ ಅಧ್ಯಾಯದಿಂದ ೧೨ ನೇ ಅಧ್ಯಾಯದ ವರೆಗೆ ನಾಲ್ಕು ಅಧ್ಯಾಯದಲ್ಲಿ ದ್ರೌಪದಿಯ ಪೂರ್ವ ಜನ್ಮದ ವೃತ್ತಾಂತವನ್ನು ಹೇಳಿದ್ದಾರೆ. ಅದರಂತೆ ಪಂಚ ಪತಿತ್ವಕ್ಕೆ ಕಾರಣವನ್ನು ನಿರೂಪಣೆಯನ್ನು ಮಾಡುತ್ತಾರೆ. ಅದು ಹಿಂದಿನ ಎಲ್ಲ ವೃತ್ತಾಂತಕ್ಕೂ ವಿಭಿನ್ನರೀತಿಯದಾಗಿದೆ.

ಮೇಧಾವಿ ಎಂಬ ಋಷಿ. ತಪೋನಿಷ್ಠ, ವನವಾಸಿ, ವಿಶಿಷ್ಟ ಜ್ಞಾನಸಂಪನ್ನ. ಇದಲ್ಲದೆ ದೂರ್ವಾಸರ ಸಖ. ಅವರ ಅನುಗ್ರಹಕ್ಕೆ ಪಾತ್ರ. ಅವನಿಗೆ ತಕ್ಕಂತ ಹೆಂಡತಿ. ದೂರ್ವಾಸರ ಅನುಗ್ರಹಕ್ಕೆ ಪಾತ್ರಳಾದ ಮಹಾಸಾಧ್ವಿ. ಇವರಿಬ್ಬರಿಗೆ ಒಬ್ಬಳೆ ಮಗಳು. ಕಾಲಕ್ರಮೇಣ ಜ್ಞಾನಸಂಪನ್ನಳಾಗಿ ಬೆಳೆಯುತ್ತಾಳೆ. ಇವಳಿಗೆ ಯೋಗ್ಯವಾದ ವಯಸ್ಸಿಗೆ ಮದುವೆ ಮಾಡಬೇಕೆಂದು ತಂದೆ ಬಯಸಿ, ವರನನ್ನು ಹುಡುಕಿ ಸಫಲನಾಗದೆ ಜ್ವರದಿಂದ ಬಳಲಿ ಮನೆಗೆ ಬರುತ್ತಾನೆ. ಮನೆ ಬಾಗಿಲಲ್ಲೇ ಮೂರ್ಛಿತನಾಗಿ ತನ್ನ ಅಂತಕಾಲವನ್ನು ತಿಳಿದು ದೇವರನ್ನು ಧ್ಯಾನಿಸಿ ಹರಿಮಂದಿರ ಸೇರುತ್ತಾನೆ. ಅವನ ಮಗಳು ಆಶ್ರಮದಲ್ಲಿ ಇದ್ದಾಗ ದೂರ್ವಾಸರು ಮತ್ತೆ ಬಂದು ಆಕೆಗೆ ಅಧಿಕ ಮಾಸದ ವ್ರತ ಮಾಡಲು ಆದೇಶಿಸುತ್ತಾರೆ. ಅದರ ಬಗ್ಗೆ ಆಕೆ ತಿರಸ್ಕಾರವನ್ನು ತೋರಲು ಕೋಪಗೊಂಡ ದೂರ್ವಾಸರು 'ನಿನಗೆ ಶಾಪ ಕೊಡುವುದಿಲ್ಲ. ಆದರೆ ಇದರ ಫಲವನ್ನು ಮುಂದಿನ ಜನ್ಮದಲ್ಲಿ ನೀನು ಅನುಭವಿಸುತ್ತಿ' ಎಂದು ಹೇಳಿ ಹೊರಟು ಹೋಗುತ್ತಾರೆ. ತನಗೆ ಯೋಗ್ಯನಾದ ಪತಿ ಸಿಗದೆ ಇರಲು ಆ ಕನ್ಯೆ ಪಶುಪತಿಯನ್ನು ಪತಿಗಾಗಿ ತಪಿಸುತ್ತಾಳೆ. ಪ್ರಸನ್ನನಾದ ಆಶುತೋಷ ಅವಳಿಗೆ ಐದು ಸಲ 'ಪತಿಂ ದೇಹಿ' ಎಂದ ಕಾರಣ ಐದು ಪತಿಯನ್ನು ಕರುಣಿಸುತ್ತಾನೆ. ಹಾಗೆಯೇ ಪುರುಷೋತ್ತಮಮಾಸ ವ್ರತ ತಿರಸ್ಕಾರದ ಫಲವಾಗಿ ಐದು ಜನ ಗಂಡರು ಎಂದೂ ಹೇಳುತ್ತಾನೆ.

ಹೀಗೆ ಅನೇಕಪುರಾಣಗಳಲ್ಲಿ ವಿವಿಧರೀತಿಯಲ್ಲಿ ದ್ರೌಪದಿಯ ಸ್ವರೂಪವನ್ನು ನಿರೂಪಿಸಿದ್ದಾರೆ. ಅದರಂತೆ ದ್ರೌಪದಿಯ ಪಂಚಪತಿತ್ವಕ್ಕೆ ಕಾರಣವನ್ನು ಹೇಳಿದ್ದಾರೆ.

### ಗರುಡಪುರಾಣ ಹಾಗು ಮಹಾಭಾರತತಾತ್ಪರ್ಯನಿರ್ಣಯದ ಏಕವಾಕ್ಯತೆ

೧೧. ಇವೆಲ್ಲ ನಿರೂಪಣೆಗೆ ವಿಭಿನ್ನ ರೀತಿಯಲ್ಲಿ ಗರುಡಪುರಾಣದ ಬ್ರಹ್ಮಕಾಂಡದಲ್ಲಿ ಹೇಳಿದ್ದಾರೆ. ದ್ರೌಪದಿಯ ಪೂರ್ವಜನ್ಮಗಳ ವಿವರ, ಅದಕ್ಕೆ ಕಾರಣ, ಪಂಚ ಪತಿತ್ವದ ಯುಕ್ತತೆ ಹಾಗು ಪಂಚ ಪತಿಗಳನ್ನುಳ್ಳ ಪತಿವ್ರತೆ ಈ ಪ್ರಮೇಯವನ್ನು ಸುಂದರವಾಗಿ ನಿರೂಪಿಸಿದ್ದಾರೆ. ಇದರಲ್ಲಿಯ ವಿಷಯಗಳನ್ನೇ ನಿರ್ಣಯವೆಂದು ಶ್ರೀಮದಾಚಾರ್ಯರು ಮಹಾಭಾರತತಾತ್ಪರ್ಯ ನಿರ್ಣಯದ ಹದಿನೆಂಟನೆ ಅಧ್ಯಾಯದಲ್ಲಿ ವಿವರಿಸಿದ್ದಾರೆ. ಸಂಕ್ಷೇಪವಾಗಿ ತಿಳಿಯುವ ಪ್ರಯತ್ನ ಮಾಡೋಣ.

೧. ಬ್ರಹ್ಮದೇವರ ಸಭೆಯಲ್ಲಿ ಶಿವನ ಸತಿ ಪಾರ್ವತಿ, ಇಂದ್ರನ ರಮಣಿ ಶಚಿ, ಯಮನ ಪತ್ನಿ ಶ್ಯಾಮಲಾ, ಅಶ್ವಿನಿದೇವತೆಗಳ ಮಡದಿ ಉಷಾದೇವಿಯರು ತಮ್ಮ ಪತಿಗಳ ಮುಂದೆ ವಿಲಾಸ ಹಾವಭಾವ ತೋರಿದರು. ಬ್ರಹ್ಮದೇವರು ಅವರಿಗೆ ಭೂಲೋಕದಲ್ಲಿ ಮನುಷ್ಯರಾಗಿ ಹುಟ್ಟಿರಿ. ಅಲ್ಲಿ ನಿಮ್ಮ ಪತಿಯನ್ನು ಬಿಟ್ಟು ಬೇರೆಯವರ ಸಂಗ ನಿಮಗೆ ಆಗಲಿ ಎಂದು ಶಪಿಸಿದರು.

೨. ಬ್ರಹ್ಮದೇವರು ಮುಂದೆ ಹಿಂದೆ ನಾಲ್ಕು ಜನ ದೇವಪತ್ನಿಯರು ಒಂದೇ ದೇಹದಲ್ಲಿ ಸೇರಿ ಓಡಾಡಿದರು. ಎರಡು ಬಾರಿ ಸುಮ್ಮನಿದ್ದ ಬ್ರಹ್ಮದೇವರು ಮೂರನೇ ಬಾರಿ 'ನನಗೆ ವಂಚನೆ ಮಾಡಲು ಹೀಗೆ ಮಾಡಿರುವದರಿಂದ ನೀವೆಲ್ಲರೂ ಮನುಷ್ಯರಾಗಿ ಮೂರು ಬಾರಿ ಒಂದೇ ದೇಹದಲ್ಲಿ ಬನ್ನಿರಿ' ಎಂದು ಶಪಿಸಿದರು.

ಈ ಎರಡು ಶಾಪದ ನಿಮಿತ್ತ ನಾಲ್ಕು ಜನ ಸಾವಿರ ವರ್ಷ ಭಾರತೀದೇವಿಯನ್ನು ಸೇವಿಸಿದರು. ಸಂತುಷ್ಟಳಾದ ಮುಖ್ಯಪ್ರಾಣನ ಮಡದಿ ಮುಂದೆ ತಮ್ಮ ದುಃಖ ದುಮ್ಮಾನ ತೋಡಿಕೊಂಡರು. ಚತುರ್ಮುಖನ ಶಾಪದಿಂದ ನಮಗೆ ಭೂಮಿಯಲ್ಲಿ ಚತುರ್ಜನ್ಮ ತಾಳಬೇಕಾಗಿದೆ. ಒಂದು ಜನುಮದಲ್ಲಿ ಪರಪುರುಷನ ಸಂಪರ್ಕದ ಶಾಪವಿದೆ. ನಮಗೆ ಭೂಲೋಕದಲ್ಲಿ ಮನುಷ್ಯರಾದಾಗ ಬೇರೆಯವರ ಸಹವಾಸವಾದರೆ ಬಹಳ ಅನರ್ಥವಾಗುತ್ತದೆ. ಸಹಿಸಲಾರದ ಕಷ್ಟಬರುತ್ತದೆ. ಹಿಂದೆ ವಾಲಿ ಪತ್ನಿ ತಾರೆ ಸೂರ್ಯಾವತಾರಿ ಸುಗ್ರೀವನ ಸಹವಾಸ ಮಾಡಿ ಮುಂದೆ ದ್ವಾಪರದವರೆಗೆ ತನ್ನ ಮೂಲ ರೂಪವನ್ನು ಸೇರಲಿಲ್ಲ. ಪತಿಯ ಸಹವಾಸ ದೊರೆಯಲಿಲ್ಲ. ಚಿತ್ರಾಂಗದೆಯಾಗಿ ಅದಕ್ಕಾಗಿ ಬಹಳ ತಪಿಸಿ ಹುಟ್ಟಿದಳು. ಆಗಲೂ ಅರ್ಜುನನ ಸಂಯೋಗ ಬಹಳ ಕಾಲ ದೊರೆಯಲಿಲ್ಲ. ಆದ್ದರಿಂದ ಹೇ ಭಾರತಿ ನೀನು ನಮ್ಮೊಡನೆ ಬಾ. ನಿನ್ನನ್ನು ವಾಯುದೇವರು ಬಿಟ್ಟರೇ ಬೇರಾರು ಮುಟ್ಟಲು ಸಾಧ್ಯವಿಲ್ಲ. ಇದು ದೇವರ ಇಚ್ಛೆ. ಅನಾದಿಕಾಲದಿಂದಲೂ ಹೀಗೆ ನಡೆದಿದೆ. ನಮಗೆ ವಾಯುದೇವರ ಸಹವಾಸವಾದರೆ ಅನರ್ಥವಾಗುವುದಿಲ್ಲ. ಎಂದು ಬೇಡಿದರು. ಭಾರತಿದೇವಿ ಒಪ್ಪಿ ಹರಸಿದಳು.

**ಮೊದಲನೇ ಜನ್ಮದ ಕಥೆ**

೧. ಎಲ್ಲ ದೇವಿಯರು ಶಿವ ನಾಮಕ ಬ್ರಾಹ್ಮಣನ ಮಗಳು ಎಂದು ಕೆಲವೆಡೆ ಇದೆ. ಋಷಿಯ ಮಗಳು ಎಂದೂ ಇದೆ. ಒಟ್ಟಿನಲ್ಲಿ ಬ್ರಾಹ್ಮಣರ ಮಗಳಾಗಿ ಹುಟ್ಟಿದರು. ಆಗ ಮದುವೆ ಆಗಲಿಲ್ಲ. ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಅವರಿಂದ ತಮ್ಮ ಪತಿಯ ಸಂಯೋಗರೂಪವಾಗ ವರವನ್ನು ಬೇಡಿದರು. ಭಾರತೀದೇವಿ ಎಲ್ಲ ಜನ್ಮಗಳಲ್ಲಿಯೂ ತಮ್ಮ ಪತಿಯೊಡನೆ ದೇವರನ್ನು ಸೇವಿಸಬೇಕು. ದೇವರ ಅನಂತ ಪ್ರೀತಿ ಆಗಬೇಕು ಎಂದು ಶಿವಾಂತರ್ಯಾಮಿಯಿಂದ ವರವನ್ನು ಪಡೆದಳು. ಇಲ್ಲಿ ಗರುಡಪುರಾಣದಲ್ಲಿ ಮೂರನೇ ಜನ್ಮದಲ್ಲಿ ನಿಮಗೆ ಪತಿಸಂಯೋಗವಾಗಲೆಂದು ರುದ್ರದೇವರು ವರವಿತ್ತರೆಂದು ಇದೆ.

**ಎರಡನೇ ಜನ್ಮದ ಕಥಾನಕ**

೨. ಮುಂದೆ ನಳರಾಜನ ಮಗಳಾಗಿ ಹುಟ್ಟಿದಳು. ಹೆಸರು ಇಂದ್ರಸೇನಾ. ಮುದ್ಗಲ ಋಷಿಯ ಕೈ ಹಿಡಿದಳು. ಇದು ಹೇಗೆ? ಪ್ರವಚನ ನಡೆದಾಗ ಬ್ರಹ್ಮದೇವರು ತಮ್ಮ ಮಗಳನ್ನೇ ಮದುವೆಯಾದರು ಎಂದು ಕೇಳಿದ ಮುದ್ಗಲರು ನಕ್ಕರು. ಬ್ರಹ್ಮದೇವರು 'ಇಂದ್ರಿಯನಿಗ್ರಹವಿದೆ ಎಂದು ಅಭಿಮಾನವಿರುವ ಮುದ್ಗಲ! ನಿನಗೆ ಭಾರತೀ ಮುಂತಾದ ಐದು ಜನ ದೇವತಾಸ್ತ್ರೀಯರ ಸಹವಾಸವಾಗಲಿ' ಎಂದು ಶಪಿಸಿದರು. ಖತಿಗೊಂಡ ಮುದ್ಗಲರು ತಪಸ್ಸಿಗೆ ನಿಂತರು. ಅನ್ನ ಆಹಾರ ತೊರೆದರು. ಬ್ರಹ್ಮದೇವರನ್ನು ಮೆಚ್ಚಿಸಿದರು.

ಕ್ಷಮಿಸಿರೆಂದು ಅಂಗಲಾಚಿದರು. ಕರುಣಾಪೂರ್ಣ ಕಮಲಾಸನರು 'ವಾಯುದೇವರು ನಿಮ್ಮನ್ನು ಹೊಕ್ಕು ಅವರ ಸಂಗ ಮಾಡುವರು. ಚಿಂತ ಬೇಡ' ಎಂದು ಹರಸಿದರು. ಮುದ್ಗಲರು ನಳನ ಮಗಳಾದ ಇಂದ್ರಸೇನಾಳನ್ನು ಮದುವೆ ಆದರು. ಆ ಮುದ್ಗಲ ಋಷಿಗಳಲ್ಲಿ ವಾಯುದೇವರು ಪ್ರವೇಶಮಾಡಿದರು. ಒಂದು ದೇಹದಲ್ಲಿರುವ ಆ ಐದು ದೇವತಾಸ್ತ್ರೀಯರೊಡನೆ ಅನೇಕ ವರ್ಷಗಳ ಕಾಲ ಸಂಸಾರ ಮಾಡಿದರು. ವಾಯುದೇವರು ವಿಹಾರ ಮಾಡುವಾಗ ಮುದ್ಗಲರು ಮೂರ್ಛಿತರಾಗಿ ಮಲಗಿದ್ದರು. ತಾವು ಹೋಗುವಾಗ ಮುದ್ಗಲರನ್ನು ಎಬ್ಬಿಸಿ ವಾಯುದೇವರು ತೆರಳಿದರು. ಮುಂದೆ ಇಂದ್ರಸೇನಾ ಮತ್ತು ಮುದ್ಗಲರು ಬೇರೆ ಬೇರೆಯಾಗಿ ತಪಸ್ಸು ಮಾಡಿದರು.

ಇಂದ್ರಸೇನಾಳ ತಪಸ್ಸಿಗೆ ಮೆಚ್ಚಿ ಮಹಾದೇವರು ಪ್ರತ್ಯಕ್ಷರಾದರು. ಅವಳ ದೇಹದಲ್ಲಿದ್ದ ಪ್ರತಿಯೊಬ್ಬರಿಗೂ ತಾವು ಆ ದೇಹದಲ್ಲಿ ಒಬ್ಬರೇ ಇದ್ದೇವೆ ಎಂದು ಭ್ರಮೆ. ಹಾಗಾಗಿ ಪ್ರತ್ಯೇಕವಾಗಿ ಪತಿಯನ್ನು ಪಾಲಿಸೆಂದು ಬೇಡಿದರು. ರುದ್ರದೇವರು ನಸು ನಕ್ಕು ಆಗಲಿ ನಿಮಗೆ ನಿಮ್ಮ ಪತಿಗಳು ದೊರೆಯುವರು. ನಿನಗೆ ಒಟ್ಟು ಐದು ಪತಿಯೆಂದು ಉಸುರಿದರು. ಇಂದ್ರಸೇನಾ ದೇಹದಲ್ಲಿರುವ ಎಲ್ಲಾ ದೇವಿಯರು ತಮಗೊಬ್ಬಳಿಗೇನೆ ಐದು ಜನ ಪತಿಯೆಂದು ಭ್ರಮಿಸಿ ಅಳಲರಾಂಭಿಸಿದರು. ಅದೇ ಸಮಯಕ್ಕೆ ಇಂದ್ರದೇವರ ಆಗಮನ ಆ ಪ್ರದೇಶಕ್ಕೆ ಆಯಿತು. ಕಾರಣ ಕೇಳಿದರು. ಸಮೀಪದಲ್ಲಿದ್ದ ಸಾಂಬಶಿವನನ್ನು ಗುರುತಿಸದೆ ಜಭರಿಸಿದರು. ನಾ ಆಳುವ ಮೂರ್ಲೋಕದಲ್ಲಿ ಒಬ್ಬ ಸ್ತ್ರೀಗೆ ಐವರು ಧವರನ್ನು ಏಕೆ ಶಪಿಸಿದಿ ಎಂದು ಗದರಿಸಿದರು. ಸಿಟ್ಟಿನಿಂದ ಸಿಡಿದ ಶಿವ 'ನಾನು ಯಾರೆಂದು ತಿಳಿಯದೆ ನನ್ನನ್ನು ಜಭರಿಸುತ್ತಿರುವೆ. ನಿನ್ನಂತೆ ನನ್ನನ್ನು ಗದರಿಸಿ ಈ ಗಿರಿಯ ಬುಡದ ಗುಹೆಯಲ್ಲಿ ಇರುವ ಇಂದ್ರರನ್ನು ನೋಡು' ಎಂದರು. ಇಂದ್ರದೇವರು ಬೆಟ್ಟ ಎತ್ತಿ ನೋಡಿದರು. ಅಲ್ಲಿ ಯಮ, ವಾಯುದೇವರು, ಅಶ್ವಿನಿದೇವತೆಗಳನ್ನು ನೋಡಿದರು.

ಭೂಲೋಕದಲ್ಲಿ ಎಲ್ಲಿ ಅವತಾರ ಮಾಡಬೇಕೆಂದು ಆಲೋಚನೆ ಮಾಡುತ್ತಿದ್ದಾರೆ. ಆ ಕ್ಷಣದಲ್ಲಿ ಬ್ರಹ್ಮದೇವರು ಬಂದರು. 'ಕುಳಿತವರು ದೇವಕಾರ್ಯದ ವಿಚಾರ ಮಾಡುತ್ತಿದ್ದಾರೆ. ನಿನ್ನ ಅವಹೇಳನ ಮಾಡಿದ್ದರಿಂದ ಅಲ್ಲಿ ಬದ್ಧರಾಗಿಲ್ಲ. ಅವರಲ್ಲಿ ನಿನಗಿಂತ ಉತ್ತಮರಾದ ವಾಯುದೇವರಿದ್ದಾರೆ. ನೀನು ಅವರನ್ನು ಬಂಧಿಸಲು ಸಾಧ್ಯವಿಲ್ಲ. ನೀನು ನಿನಗಿಂತ ಸಣ್ಣವರಾದ ಇಂದ್ರದೇವರಿಗೆ ಸುಳ್ಳು ಹೇಳಿದಿ ಆದ್ದರಿಂದ ಅವನಿಂದ ಪರಾಭವವನ್ನು ಹೊಂದು. ನಾನು ಶಪಿಸಿದ ದೇವಿಯರಿಗೆ ನನ್ನ ಜೊತೆ ವಿಚಾರ ಮಾಡದೇ ಅವರವರ ಪತಿ ಭಾಗ್ಯದ ವರ ನೀಡಿದಿ. ಆದ್ದರಿಂದ ನೀನು ಭೂಲೋಕದಲ್ಲಿ ಹುಟ್ಟು. ನಿನ್ನ ಸತಿಯ ಸಹವಾಸ ನಿನಗೆ ಆಗುವುದು ಬೇಡ. ಬ್ರಹ್ಮಚಾರಿ ಆಗಿ ಉಳಿಯುವಿ. ವೈವಸ್ವತ ಮನ್ವಂತರದ ಇಪ್ಪತ್ತೊಂಬತ್ತನೇ ದ್ವಾಪರದಲ್ಲಿ ವೇದವಿಭಾಗ ಮಾಡಿ, ಸಾವರ್ಣಿ ಮನ್ವಂತರದಲ್ಲಿ ಸಪ್ತರ್ಷಿಯಾಗಿ ಮೂಲರೂಪವನ್ನು ಹೊಂದಿದಾಗ ನಿನಗೆ ನಿನ್ನ ಸತಿ ಸಂಯೋಗವಾಗುತ್ತದೆ' ಎಂದು ಶಾಪ ಹಾಗು ವರಗಳನ್ನು ಕೊಟ್ಟರು.

ಹೀಗೆ ಉಳಿದೆಲ್ಲ ಪುರಾಣ ಹಾಗು ಉಪಲಬ್ಧವಾದ ಮಹಾಭಾರತ ಪ್ರತಿಗಿಂತಲೂ ಅತ್ಯಂತ ವಿಸ್ತಾರವಾಗಿ ದ್ರೌಪದಿಯ ನಿರ್ಣಯವನ್ನು ಹೇಳಿದ್ದು ಗರುಡಪುರಾಣ ಬ್ರಹ್ಮಖಂಡ. ಇದರಲ್ಲಿ ತಾರತಮ್ಯಕ್ಕೆ ಅನುಗುಣವಾಗಿ ನಿರೂಪಣೆ ಮಾಡಿದ್ದಾರೆ. ಭಾರತೀದೇವಿ ಹಾಗು ಇತರ ದೇವಿಯರ ಮಹತ್ವವನ್ನು ವೇದವ್ಯಾಸದೇವರ ಸಿದ್ಧಾಂತಕ್ಕೆ ಕುಂದು ಬರದಂತೆ ಹೇಳಿದ್ದಾರೆ. ಅದರಂತೆ ಶ್ರೀಮದಾಚಾರ್ಯರು ಇದನ್ನು ಅನುಸರಿಸಿ ಕಥಾನಿರ್ಣಯವನ್ನು ಮಾಡಿದ್ದಾರೆ. ಅದಕ್ಕೆ ಕಾರಣ ಇದಕ್ಕೆ ಸಂವಾದಿಯಾದ ವೇದ, ಪುರಾಣಗಳು ಇವೆ ಎಂದು ಆಚಾರ್ಯರು ಹೇಳುತ್ತಾರೆ. ಆದ್ದರಿಂದ ಇದು ದ್ರೌಪದಿಯ ಯಥಾರ್ಥವಾದ ಸ್ವರೂಪ

ಹಾಗು ಮಹತ್ವವನ್ನು ತಿಳಿಸಿ ಕೊಡುತ್ತದೆಯಾದ್ದರಿಂದ ಇದರಂತೆ ದ್ರೌಪದಿಯ ಸ್ವರೂಪವನ್ನು ತಿಳಿಯುವುದು ಕರ್ತವ್ಯವಾಗಿದೆ.

**ಮಹಾಭಾರತತಾತ್ಪರ್ಯ ನಿರ್ಣಯದ ಕೊಡುಗೆ**

ಮಹಾಭಾರತತಾತ್ಪರ್ಯ ನಿರ್ಣಯ ನಿರ್ಣಯಗಳ ಆಗರ. ಇದರಲ್ಲಿ ಮಾಡಿದ ನಿರ್ಣಯಕ್ಕೆ ಲೆಕ್ಕವಿಲ್ಲ. ಪ್ರತಿಯೊಂದು ಚ, ತು ಅಕ್ಷರವೂ ವಿಶೇಷವಾದ ನಿರ್ಣಯವನ್ನು ತಿಳಿಸುತ್ತದೆ. ದ್ರೌಪದಿಯ ಬಗ್ಗೆ ನಿರ್ಣಯದಲ್ಲಿ ಮಾಡಿದ ನಿರ್ಣಯದ ಬಗ್ಗೆ ಹೇಳುವದಾದರೆ.

೧. ಹಿಂದೆ ತಿಳಿಸಿದಂತೆ ಮಹಾಭಾರತ, ಸ್ಕಾಂದ, ಮಾರ್ಕಂಡೇಯ, ಬೃಹನ್ನಾರದೀಯ, ಬ್ರಹ್ಮವೈವರ್ತ ಪುರಾಣ ಮುಂತಾದವುಗಳಲ್ಲಿ ದ್ರೌಪದಿಯ ಬಗ್ಗೆ ಹೇಳಲಾದ ಮಾತುಗಳನ್ನು ನೋಡಿದ್ದೇವೆ. ಅದರಲ್ಲಿ ಕೆಲವೆಡೆ ಶಚಿ, ಕೆಲವು ಕಡೆ ಪಾರ್ವತಿ, ಕೆಲವು ಗ್ರಂಥದ ಭಾಗದಲ್ಲಿ ಹಿಂದಿನ ಇಂದ್ರರ ಮಡದಿಯಾದ ಶ್ರೀ, ಋಷಿ ಕನ್ಯಾ , ನಳನ ಮಗಳಾದ ಇಂದ್ರಸೇನಾ, ಪಂಚೇಂದ್ರರ ಲಕ್ಷ್ಮೀ, ಬ್ರಾಹ್ಮಣ ಕುಮಾರಿ ಎಂದು ಹೇಳಿದ್ದಾರೆ. ಇವೆಲ್ಲವೂ ಸರಿಯೇ. ಆದರೆ ಪೂರ್ಣ ಸರಿಯಲ್ಲ. ಏಕದೇಶ ಸರಿಯಾಗಿದೆ . ದ್ರೌಪದಿ ಭಾರತೀದೇವಿ. ಅವಳಲ್ಲಿ ಪಾರ್ವತಿ, ಶಚಿ, ಅಲ್ಲದೆ ಐವರು ಇಂದ್ರರ ಮಡದಿಯರ ಅಂಶ. ಅವರೇ ಬ್ರಹ್ಮ ಶಾಪದಿಂದ ಋಷಿಕನ್ಯಾ, ಋಷಿಗಳು ಬ್ರಾಹ್ಮಣರಾದ್ದರಿಂದ ಬ್ರಾಹ್ಮಣಕುವರಿ ಅವಳೇ ನಳನ ಮಗಳಾದ ಇಂದ್ರಸೇನಾ ಎಂದು ಪ್ರಮಾಣ ಪುರಸ್ಸರವಾಗಿ ಪ್ರತಿಪಾದಿಸಿದ್ದಾರೆ.

೨. ಇನ್ನು ಲಕ್ಷ್ಮೀ ಶಬ್ದ ಮತ್ತು ಶ್ರೀಶಬ್ದಗಳು ಪರ್ಯಾಯವಾಗಿದೆ. ಇಲ್ಲಿ ಶ್ರೀ ಅವತಾರ ದ್ರೌಪದಿ ಎಂದರೆ ಲಕ್ಷ್ಮೀದೇವಿ ಎಂದು ಹೇಳಬಾರದು. ಏಕೆಂದರೆ ಲಕ್ಷ್ಮೀ ನಾರಾಯಣ ಮಡದಿ ಅವನನ್ನು ಬಿಟ್ಟು ಮತ್ಯಾರನ್ನು ಮದುವೆಯಾಗುವದಿಲ್ಲ. ಹಾಗಾಗಿ ಅವಳು ಪಂಚ ಪಾಂಡವರ ಮಡದಿ ಆಗಲು ಸಾಧ್ಯವಿಲ್ಲ. ಹಾಗಾಗಿ ಇಲ್ಲಿರುವ ಶ್ರೀ ಶಬ್ದಕ್ಕೆ ಮಹಾಲಕ್ಷ್ಮೀ ಎಂದು ಅರ್ಥ ಮಾಡದೆ ಭಾರತಿ ಹಾಗು ಅವಳ ದೇಹದಲ್ಲಿರುವ ದೇವಿಯರ ಪರವಾಗಿ ಅರ್ಥ ಮಾಡಬೇಕು ಎಂಬ ಮನಸ್ಸಿನಲ್ಲಿ ಇಟ್ಟು ಕೊಂಡು 'ತಾಶ್ಚೇಂದ್ರಯಮನಾ-ಸತ್ಯಸಂಶ್ರಯಾತ್ ಶ್ರಿಯ ಈರಿತಾಃ' ಎಂದು ತಮ್ಮ ತಮ್ಮ ಪತಿಗಳನ್ನು ಆಶ್ರಯ ಮಾಡಿದ್ದರಿಂದ ಅವರಿಗೂ ಶ್ರೀ ಎಂದು ಕರೆಯಬೇಕು ಎಂದಿದ್ದಾರೆ. ಹೀಗೆ ಮಹಾಭಾರತ ಮತ್ತು ಇತರ ಪುರಾಣಗ್ರಂಥಗಳ ವಿರೋಧ-ವನ್ನು ಪರಿಹಾರ ಮಾಡಿ ನಿರ್ಣಯ ಮಾಡಿರುವುದು ಅತ್ಯಪೂರ್ವವಾದ ಅನನ್ಯಾದೃಶವಾದ ನಿರ್ಣಯ.

೩. ಋಷಿಕನ್ಯೆಯ ಜನ್ಮದಲ್ಲಿ ಭಾರತಿದೇವಿಗೆ ರುದ್ರದೇವರನ್ನು ಕುರಿತು ಭಾರತೀ ತಪಸ್ಸು ಮಾಡುವ ಪ್ರಸಕ್ತಿ ಇಲ್ಲ. ಆದ್ದರಿಂದ ಪಂಚದೇವಿಯರ ದೇಹದಲ್ಲಿರುವ ಭಾರತೀದೇವಿಯ ತಪಸ್ಸಿನ ಬಗ್ಗೆ ಹೇಳುತ್ತಾರೆ.

೪. ಅದರಂತೆ ನಳನ ಮಗಳಾದ ಇಂದ್ರಸೇನಾಳ ಬಗ್ಗೆ ಹೇಳುವಾಗ ಇಂದ್ರದೇವರು ರುದ್ರದೇವರ ಆಜ್ಞೆಯಂತೆ ಬೆಟ್ಟ ಎತ್ತುವ ಕಥೆಯವರೆಗೆ ಮಾತ್ರ ಉಪಲಬ್ಧವಾದ ಮಹಾಭಾರತದಲ್ಲಿ ನೋಡಲು ಸಿಗುತ್ತದೆ. ಶ್ರೀಮದಾಚಾರ್ಯರು ನಿರ್ಣಯದಲ್ಲಿ ಈ ವಿಷಯವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ಯಾವ ವಿರೋಧವಿಲ್ಲ. ಆದರೆ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ನಿರೂಪಿತವಾಗಿರುವ ಮುಂದಿನ ಕಥಾ ಭಾಗ ಈಗ ದೊರೆತಿರುವ ಮಹಾಭಾರತದ ಪುಸ್ತಕಗಳಲ್ಲಿ ನೋಡಲು ಸಿಗುವುದಿಲ್ಲ. ಅದು ಲುಪ್ತವಾಗಿರಬಹುದು. ಆದರೆ ಗರುಡಪುರಾಣದ ಬ್ರಹ್ಮಕಾಂಡದ ಹದಿನಾರನೇ ಅಧ್ಯಾಯದಲ್ಲಿ ನೋಡಬಹುದಾಗಿದೆ. ಈಗ ಉಪಲಬ್ಧವಾದ ಮುದ್ರಿತವಾದ ಮಹಾಭಾರತ ಪುಸ್ತಕಗಳಲ್ಲಿ ಬೇರೆ ರೀತಿಯಾಗಿಯೆ ಕಥೆಯಿದೆ.

ಶಿವನ ಆಜ್ಞೆಯಂತೆ ಇಂದ್ರದೇವರು ಪರ್ವತವನ್ನು ಎತ್ತಿದರು. ಪರ್ವತದ ಬುಡದಲ್ಲಿದ್ದ ಶಿವನ ಕೋಪಕ್ಕೆ ತುತ್ತಾದ ಯಮ, ವಾಯು, ಅಶ್ವಿನಿದೇವತೆಗಳು ಇದ್ದರು. ಇವರು ಪೂರ್ವೇಂದ್ರರು. ಅವರೆಲ್ಲರು ಪಾರ್ವತೀಪತಿಯನ್ನು ಅನುಗ್ರಹಿಸು ಎಂದು ಬೇಡಿದರು. ರುದ್ರದೇವರ ಆಜ್ಞೆಯಂತೆ ಆ ದೇವತೆಗಳು ಹಾಗು ಇಂದ್ರದೇವರು ಭೂಮಿಯಲ್ಲಿ ಪಾಂಡವರಾಗಿ ಜನಿಸಿದರು ಎಂದು ಸಿಗುತ್ತದೆ.

ಆದರೆ ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ ಪಂಚೇಂದ್ರರಲ್ಲಿ ವಾಯುದೇವರಿದ್ದಾರೆ. ಅವರು ವಾಯುದೇವರಿಗಿಂತ ಉತ್ತಮರು. ಅವರು ಶಿವನ ಕೋಪಕ್ಕೆ ತುತ್ತಾಗಿ ಬೆಟ್ಟ ಬುಡದಲ್ಲಿ ಬಂಧಿಯಾಗಿರಲು ಸಾಧ್ಯವಿಲ್ಲ. ಆದ್ದರಿಂದ ಅಲ್ಲಿ ಕುಳಿತಿದ್ದ ಯಮ, ವಾಯು ಹಾಗು ಅಶ್ವಿನಿದೇವತೆಗಳು ಭೂಮಿಯಲ್ಲಿ ಅವತಾರಕ್ಕಾಗಿ ವಿಚಾರ ಮಾಡುತ್ತಿದ್ದರು ಎನ್ನುವುದೇ ಯುಕ್ತವಾಗುತ್ತದೆ. ಇದಕ್ಕೆ ಪ್ರಮಾಣವಾಗಿ ವೇದಪುರಾಣಗಳೂ ಇದೆ.

ಆದ್ದರಿಂದ ಗರುಡ ಪುರಾಣ ಹಾಗು ತಾತ್ಪರ್ಯನಿರ್ಣಯದಲ್ಲಿ ಹೇಳಿದಂತೆ ಕಥೆಯನ್ನು ತಿಳಿಯುವುದು ಸರಿಯಾಗಿದೆ. ಇದು ದ್ರೌಪದಿಯ ವಿಷಯದಲ್ಲಿ ಮಾಡಿದ ವಿಶೇಷ ನಿರ್ಣಯದ ಕೊಡುಗೆ.

**ನಾಲ್ಕು ಜನ್ಮಗಳು ಯಾವು ?**

ಶಾಪಗ್ರಸ್ತರಾದ ಉಮಾದಿದೇವಿಯರು ನಾಲ್ಕು ಜನ್ಮವನ್ನು ಪಡೆಯಬೇಕು. ಯಾವುದು ಆ ಜನ್ಮಗಳು ಎನ್ನುವ ವಿಷಯದಲ್ಲಿ ಶ್ರೀಮದಾಚಾರ್ಯರು ಹಾಗು ಅನೇಕ ಟಿಪ್ಪಣಿಕಾರರ ವಿಚಾರವನ್ನು ನೋಡೋಣ. ಮಹಾಭಾರತತಾತ್ಪರ್ಯನಿರ್ಣಯದ ಹದಿನೆಂಟನೇ ಅಧ್ಯಾಯದಲ್ಲಿ ಹೇಳಿದಂತೆ ಹೀಗೆ ಹೇಳಬಹುದು.

೧. ಬ್ರಹ್ಮದೇವರನ್ನು ವಂಚನೆ ಮಾಡುವದಕ್ಕಾಗಿ ಏಕದೇಹದಿಂದ ಉಮಾ, ಶಚಿ, ಶ್ಯಾಮಲಾ ಮತ್ತು ಉಷಾ ದೇವಿಯರು ಬಂದರು. ಅದಕ್ಕಾಗಿ ಬ್ರಹ್ಮದೇವರ ಶಾಪ ಕೊಟ್ಟರು. ಏಕದೇಹದಿಂದ ನಾಲ್ಕು ಜನ ಮೂರು ಜನ್ಮ ಪಡೆಯಿರಿ ಎಂದು. ಈ ಜನ್ಮಗಳಲ್ಲಿ ಅನ್ಯಪುರುಷ ಸಂಬಂಧ ಶಾಪ ಇಲ್ಲ. ಹೀಗಾಗಿ ಮೂರು ಜನ್ಮಗಳನ್ನು ಎತ್ತಬೇಕಾಯಿತು.

೨. ಬ್ರಹ್ಮದೇವರ ಸಭೆಯಲ್ಲಿ ಅಸಭ್ಯವಾಗಿ ವರ್ತಿಸಿದ್ದಕ್ಕಾಗಿ ಬ್ರಹ್ಮದೇವರು ಉಮಾ ಮುಂತಾದ ನಾಲ್ಕು ಜನ ದೇವಿಯರಿಗೆ 'ಮಾನುಷರಾಗಿ ಹುಟ್ಟಿರಿ. ನಿಮಗೆ ಆಗ ಅನ್ಯಪುರುಷ ಸಂಪರ್ಕವಾಗಲಿ' ಎಂದು ಶಾಪವಿತ್ತರು. ಇದು ಒಂದು ಜನ್ಮ. ಹೀಗೆ ನಾಲ್ಕು ಜನ್ಮ.

**ನಾಲ್ಕು ಜನ್ಮಗಳು ಯಾವುದು ಎಂಬ ವಿಷಯದಲ್ಲಿ ಟಿಪ್ಪಣಿಕಾರರ ಅಭಿಪ್ರಾಯವನ್ನು ನೋಡೋಣ.**

**ಶ್ರೀವಾದಿರಾಜರು-** ಮೊದಲನೇದು ಶಿವಕನ್ಯಾ ಜನ್ಮ, ಎರಡನೇದು ನಲನಂದಿನಿ ಜನ್ಮ, ಮೂರನೇದು ಇಂದ್ರಸೇನಾ ಜನ್ಮ, ನಾಲ್ಕನೇದು ದ್ರೌಪದಿ ಎಂದು ವಿವರಣೆಯನ್ನು ಮಾಡುತ್ತಾರೆ. ಇಂದ್ರಸೇನೇತಿ ವಿಖ್ಯಾತಾ ಪುರಾ ನಾಲಾಯನೀ ಸುತಾ ಎಂದು ಸಭಾಪರ್ವದ ವಾಕ್ಯ, ನಾಲಾಯನೀ ಹೀಂದ್ರಸೇನಾ ಯದ್ವೈವ ವಶ್ಯಾ ನಿತ್ಯಂ ಮುದ್ಗಲಸ್ಯಾಡಮೀಢ ಎಂದು ಅರಣ್ಯಪರ್ವದ ವಾಕ್ಯಗಳಿಂದ ನಾಲಾಯನೀ ಎಂಬ ಶಬ್ದಕ್ಕೆ ನಲನ ಮಗಳು ಎಂದರ್ಥ. ಅವಳ ಹೆಸರು ಇಂದ್ರಸೇನಾ. ಆದ್ದರಿಂದ ನಾಲಾಯನೀ ಇಂದ್ರಸೇನಾ ಒಬ್ಬಳೇ. ಇಬ್ಬರಲ್ಲ. ಅಥವಾ ಇನ್ನೊಬ್ಬಳು ಇರಬಹುದು. ಅವರಿಗೆ ಪ್ರಮಾಣ ಸಿಕ್ಕಿರಬಹುದು.

**ವರದರಾಜಾಚಾರ್ಯರು-** ವಿಪ್ರಕನ್ಯಾ, ಇಂದ್ರಸೇನಾ, ದ್ರೌಪದಿ ಎಂದು ಮೂರು ಜನ್ಮಗಳು. ಇದು ಒಂದೇ ದೇಹದಲ್ಲಿ ಬ್ರಹ್ಮದೇವರನ್ನು ವಂಚಿಸುವದಕ್ಕಾಗಿ ಹೋದದ್ದರ ಫಲ. ಉಮಾದಿದೇವಿಯರು

ಭಾರತೀದೇವಿಯ ಸಂಪರ್ಕವಿಲ್ಲದೆ ಪ್ರತ್ಯೇಕವಾಗಿ ಜನ್ಮವನ್ನು ತಳೆದಿದ್ದಾರೆ. ಇದು ಬ್ರಹ್ಮಸಭೆಯಲ್ಲಿ ವಿಲಾಸವನ್ನು ತೋರಿದರ ಫಲ ಎಂದು ನಾಲ್ಕು ಜನ್ಮಗಳನ್ನು ವಿವರಿಸುತ್ತಾರೆ.

ನಾಲ್ಕು ಜನ್ಮಗಳಲ್ಲಿ ವಿಪ್ರಕನ್ಯಾ ಆದಾಗ ಸ್ವಪತಿ ಸಂಪರ್ಕ ಹಾಗು ಪರಪುರುಷ ಸಂಪರ್ಕ ಇಲ್ಲ. ಇಂದ್ರಸೇನಾ ಜನ್ಮದಲ್ಲಿ ಉಮಾದಿ ನಾಲ್ಕು ದೇವಿಯರಿಗೆ ಪರಪುರುಷಸಂಪರ್ಕ ಮಾತ್ರ. ದ್ರೌಪದಿ ಜನ್ಮದಲ್ಲಿ ಪತಿ ಸಂಯೋಗ ಹಾಗು ಪರಪುರುಷ ಸಂಪರ್ಕ. ಭಾರತೀದೇವಿಯ ಸಂಬಂಧವಿಲ್ಲದೆ ಪ್ರತ್ಯೇಕವಾಗಿ ನಾಲ್ಕನೇ ಜನ್ಮದಲ್ಲಿ ಬಂದಾಗ ತಮ್ಮ ಗಂಡರ ಸಂಪರ್ಕವಾಗಿದೆ. ಉಮಾದೇವಿಗೆ ಪ್ರತ್ಯೇಕವಾಗಿ ನಾಲ್ಕನೇ ಜನ್ಮವಿಲ್ಲ. ಅಲ್ಲದೇ ಬ್ರಹ್ಮದೇವರು 'ಭಾರತ್ಯೈವ ತು ಪಾರ್ವತಿ' ಎಂದು 'ಲೌಕಿಕ ವ್ಯವಹಾರಗಳನ್ನು ಪಾರ್ವತಿ ಭಾರತಿಯಿಂದ ಕೂಡಿ ಮಾಡಲಿ' ಎಂದು ಹೇಳಿರುವದರಿಂದ ಪಾರ್ವತಿ ದ್ರೌಪದಿಯ ಜೊತೆ ಕೂಡಿ ಲೌಕಿಕ ವ್ಯಾಪಾರಗಳನ್ನು ಮಾಡಿದ್ದಾಳೆ ಎಂದು ಹೇಳಬೇಕು.

**ತಾಮ್ರಪರ್ಣೀ- ಲಘುಅನಂತಭಟ್ಟೀಯ-** ಮೊದಲನೇದು ಶಿವಕನ್ಯಾ ಜನ್ಮ, ಎರಡನೇದು ನಲನಂದಿನ ಜನ್ಮ, ಮೂರನೇದು ದ್ರೌಪದಿ ಜನ್ಮ, ನಾಲ್ಕನೇದು ಕಲ್ಯಾಣದೇವಿ ಎಂದು. ಶ್ರೀಮದಾಚಾರ್ಯರು ಅವತಾರ ಮಾಡಿದಾಗ ಅವತಾರವಾದದ್ದುಎಂದು ವಿವರಣೆಯನ್ನು ಮಾಡುತ್ತಾರೆ.

**ಅನಂತಭಟ್ಟರು-** ಮೂರು ಜನ್ಮಗಳನ್ನು ಶ್ರೀಮದಾಚಾರ್ಯರು ನಿರೂಪಣೆ ಮಾಡಿದ್ದಾರೆ. ನಾಲ್ಕನೇ ಜನ್ಮದಲ್ಲಿ ತಮ್ಮ ಪತಿಸಂಯೋಗಕ್ಕಾಗಿ ನಾಲ್ಕುಜನ ದೇವಿಯರು ಪ್ರತ್ಯೇಕವಾಗಿಯೇ ಹುಟ್ಟಿದ್ದಾರೆ ಎಂದು ಹೇಳುತ್ತಾರೆ.

**ಅತಿವಿಶದವಾಕ್ಯಾರ್ಥವಿವೃತಿ-** ವಿಪ್ರಕನ್ಯಾಜನ್ಮ ಒಂದು, ನಲರಾಜನ ಮಗಳಾಗಿ ಎರಡನೇದು, ಮೂರನೇದು ದ್ರೌಪದಿ, ನಾಲ್ಕನೇದು ಕಾಲಿದೇವಿಜನ್ಮ. ಇಲ್ಲಿ 'ಸಾ ಭಾರತೀ ನಾನ್ಯದೇವ್ಯಸ್ತತ್ರಾವಿಷ್ಟಾಃ' ಎಂದು ೨೦ ನೇ ಅಧ್ಯಾಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ. ಆದ್ದರಿಂದ ಕಾಳೀದೇವಿ ಶುದ್ಧ ಭಾರತೀದೇವಿ. ಆದ್ದರಿಂದ ನಾಲ್ಕು ಜನ್ಮಗಳ ಗುಂಪಿನಲ್ಲಿ ಕಾಳೀದೇವಿ ಅವತಾರ ಹೇಳಬಾರದು ಎಂದು ಕೆಲವರ ಅಭಿಪ್ರಾಯ. ಚಂದ್ರಾ ಎಂಬ ಅವತಾರವನ್ನು ಭಾರತೀದೇವಿ ಮಾಡಿದ್ದಾಳೆ. ಅದು ಶ್ರೀಮದಾಚಾರ್ಯರು ಅವತರಿಸಿದಾಗ ಆದದ್ದು. ಅಲ್ಲಿ ನಾಲ್ಕು ಜನರ ಆವೇಶವಿದೆ ಎಂದು ಕೆಲವು ಟಿಪ್ಪಣಿಕಾರರು ಹೇಳುತ್ತಾರೆ.

**ಜನಾರ್ದನ ಭಟ್ಟರು- ಚಿಟ್ಟ ಆಚಾರ್ಯರು-** ಶಿವಕನ್ಯಾ, ಇಂದ್ರಸೇನಾ, ದ್ರೌಪದಿ ಎಂದು ಮೂರು ಜನ್ಮಗಳು. ಯಮಪತ್ನಿ ಶ್ಯಾಮಲಾ ದೇವಕಿ ಎಂದು ಶಿಶುಪಾಲನ ಮಗಳು, ಚಿತ್ರಾಂಗದಾ ಶಚೀದೇವಿ, ಜರಾಸಂಧನ ಮಗಳು ಉಷಾದೇವಿ ಸಹದೇವನ ಹೆಂಡತಿ. ರುದ್ರದೇವರು ಅಶ್ವತ್ಥಾಮಾಚಾರ್ಯರಾಗಿ ಅವತರಿಸಿದ್ದಾರೆ. ಅದೇ ರೀತಿ ಉಮಾದೇವಿಗೂ ಜನ್ಮ ಆಗಿದೆ ಎಂದು ಹೇಳಬೇಕು. ಏಕೆಂದರೆ ಹೆಂಡತಿ ಇದ್ದಾಗ ಅವಳೊಡನೆ ವಿವಾಹವಾಗದೇ ಇದ್ದರೆ ಆಗ ಸ್ತ್ರೀವಿಯೋಗ ಎನಬೇಕು. ಹೆಂಡತಿಯೇ ಇಲ್ಲದಿರುವಾಗ ಸ್ತ್ರೀವಿಯೋಗ ಎನ್ನಲು ಸಾಧ್ಯ ವಿಲ್ಲ. ಅಲ್ಲದೇ 'ಅಶ್ವತ್ಥಾಮಾಚಾರ್ಯರಾದಾಗ ನಿನಗೆ ಸ್ತ್ರೀಸಂಪರ್ಕವಾಗದಿರಲಿ' ಎಂದು ಬ್ರಹ್ಮದೇವರ ಶಾಪವಿದೆ. ಅದು ಉಮಾದೇವಿಗೆ ಪ್ರತ್ಯೇಕ ಜನ್ಮ ಹೇಳಿದಾಗಲೇ ಯುಕ್ತಿಯುಕ್ತವಾಗುತ್ತದೆ ಎಂದು ವ್ಯಾಖ್ಯಾನ ಮಾಡುತ್ತಾರೆ.

ಇದಲ್ಲದೆ ಶ್ರೀಮದಾಚಾರ್ಯರು ಮ.ಭಾ.ತಾ.ನಿ.೩೨ ನೇ ಅಧ್ಯಾಯದಲ್ಲಿ ತಮ್ಮ ಮಧ್ವಾವತಾರದ ವಿವರಣೆಯನ್ನು ಹೇಳುವಾಗ 'ಜಾತಃ ಪುನಃ ವಿಪ್ರತನುಃ ಸಃ ಭೀಮಃ ದೈತ್ಯೈರ್ನಿಗೂಢಂ ಹರಿತತ್ವಮಾಹ ।

ತದ್ವೈವ ಕೃಷ್ಣಾ ಭುವಿ ಪ್ರಜಾತಾ ಪ್ರೀತ್ಯೈ ಹರೇಃ' ಎಂದು ದ್ರೌಪದಿ ಅವತಾರ ಮಾಡಿದ್ದನ್ನು ಹೇಳಿದ್ದಾರೆ. ಶ್ರೀಮದಾಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ ಭಾರತೀದೇವಿಯರ ಅವತಾರ ನಿರೂಪಣೆ ಮಾಡುವಾಗ 'ಶಿವಕನ್ಯೇಂದ್ರಸೇನಾ ಚ ದ್ರೌಪದೀ ಕಾಶಿಜಾ ತಥಾ । ಚಂದ್ರಾ...' ಎಂದು ಹೇಳಿದ್ದಾರೆ. ಭಾರತೀದೇವಿಯ ರೂಪ ಚಂದ್ರಾ ಎಂದು ಹೇಳಿದ್ದಾರೆ. ಈ ರೂಪ ಶ್ರೀಮದಾಚಾರ್ಯರ ಅವತಾರ ಸಮಯದಲ್ಲಿ ಆದದ್ದು ಎಂದು ಟಿಪ್ಪಣೀಕಾರರ ಅಭಿಪ್ರಾಯವಾಗಿದೆ.

**ಸಂಪಾದಕ ಉವಾಚ-**

ಯದ್ಯಪಿ ಮ.ತಾ.ನಿ ದಲ್ಲಿ 'ಕೃಷ್ಣಾ ಪ್ರಜಾತಾ' ಎಂದಿದ್ದಾರೆ. ಆದ್ದರಿಂದ ಪಂಚ ದೇವಿಯರು ಕೂಡಿ ಬಂದಿದ್ದಾರೆ ಎಂದು ಹೇಳಬಹುದು. ಆದರೂ ಬೃ.ಭಾಷ್ಯದಲ್ಲಿ ಹೇಳುವಾಗ ಕಾಶಿಜಾ ಎಂದು ಹೇಳಿ ನಂತರ ಚಂದ್ರಾ ಎಂದು ಹೇಳಿರುವದರಿಂದ ಕೇವಲ ಭಾರತಿ ಎಂದೂ ಹೇಳಬಹುದು. ಕೃಷ್ಣಾ ಶಬ್ದವನ್ನು ಕಾಳೀದೇವಿ ಪ್ರಸಂಗದಲ್ಲಿ ಶ್ರೀಮದಾಚಾರ್ಯರು ಭಾರತೀದೇವಿ ಎಂಬ ಅರ್ಥದಲ್ಲಿ ಬಳಸಿದ್ದೂ ಕಾಣುತ್ತೇವೆ. ಆದರೆ ಕಾಳಿಸಂದರ್ಭದಲ್ಲಿ ಕೃಷ್ಣಾ ಎಂದು ಹೇಳಿ, ಅಲ್ಲಿ ಭಾರತೀ ಅಲ್ಲದೆ ಬೇರೆ ಯಾರೂ ಇರಲಿಲ್ಲ ಎಂದೂ ಹೇಳುತ್ತಾರೆ. ಆದರೆ ಚಂದ್ರಾದೇವಿಯ ಪ್ರಸಂಗದಲ್ಲಿ ಅನ್ಯದೇವಿಯರು ಇದ್ದಾರೋ ಇಲ್ಲವೋ ಹೇಳುವುದಿಲ್ಲ. ಆದ್ದರಿಂದ ಚಂದ್ರಾ ಐದು ಜನ ಕೂಡಿದ್ದು ಎಂದು ಹೇಳಬಹುದು ಎಂದು ಅನಿಸುತ್ತದೆ. ಅದರಂತೆ ಚಂದ್ರಾದೇವಿ ಐದು ಜನ ವಿಶಿಷ್ಟರಾದವರು ಎನ್ನುವುದಕ್ಕೆ ಗರುಡ ಪುರಾಣ ಪ್ರಮಾಣವನ್ನು ನೋಡಬಹುದು. ಇದು ಅನಂತಭಟ್ಟೀಯದಲ್ಲಿ ಉದಾಹೃತವಾದದ್ದು. ಅದರಲ್ಲಿ ಮತ್ತೊಬ್ಬ ಟಿಪ್ಪಣಿಕಾರರ ಅಭಿಪ್ರಾಯವನ್ನು ನಿರೂಪಿಸುವಾಗ ಉದಾಹರಿಸುತ್ತಾರೆ.

'ದೇಹಂ ತ್ಯಕ್ತ್ವಾ ವಿಶಿಷ್ಟೈವ ಕಾಲಡೀಗ್ರಾಮಸಂಜ್ಞಕೇ ।
ಶಂಕರಸ್ಯ ಗೃಹೇ ಚಂದ್ರಾ ಭವಿಷ್ಯತಿ ಕಲೌ ಯುಗೇ ।
ವಾಯೋಸ್ತೃತೀಯರೂಪಾರ್ಥಂ ಸಾ ಕನ್ಯೈವ ಗತಿಂ ಗತಾ ॥' (ಗ.ಪು.ಬ್ರ.ಕಾ.೧೬.೧೦೦)

ಇಲ್ಲಿ ನಾಲ್ಕನೇ ಜನ್ಮದ ಶಾಪ ಅನ್ಯಪುರುಷಸಂಪರ್ಕಕ್ಕಾಗಿ ಬ್ರಹ್ಮದೇವರು ಕೊಟ್ಟಿದ್ದಾರೆ. ಉಮಾದಿ ನಾಲ್ಕು ದೇವಿಯರಿಗೆ ವಾಯುದೇವರ ಸಂಪರ್ಕ ಇಂದ್ರಸೇನಾ ಜನ್ಮದಲ್ಲಿ ಆಗಿದೆ. ಉಮಾದಿದೇವಿಯರಿಗೆ ವಾಯುದೇವರು ತಮ್ಮ ಪತಿಗಳಿಂದ ಭಿನ್ನರಾದ್ದರಿಂದ ಅವರ ಸಂಪರ್ಕವಾದದ್ದರಿಂದ ಅನ್ಯಪುರುಷಸಂಪರ್ಕ ಇಂದ್ರಸೇನಾ ಜನ್ಮದಲ್ಲಿ ಆಗಿದೆ. ಕಾರಣ ಐದು ಜನ ಕೂಡಿ ನಾಲ್ಕನೇ ಜನ್ಮ ಎತ್ತುವ ಕಾರಣವಿಲ್ಲ. ಮೂರು ಜನ್ಮದಲ್ಲೇ ನಾಲ್ಕು ಜನ್ಮದಲ್ಲಿ ಅನುಭವಿಸಬೇಕಾದ ಕರ್ಮಗಳನ್ನು ಅನುಭವಿಸಿದ್ದಾರೆ. ಆದ್ದರಿಂದ ಶ್ರೀಮದಾಚಾರ್ಯರು ನಾಲ್ಕನೇ ಜನ್ಮವನ್ನು ಪ್ರತ್ಯೇಕವಾಗಿ ಹೇಳಿಲ್ಲಎಂದು ತೋರುತ್ತದೆ.

**ದ್ರೌಪದಿಯ ನಿರ್ದೋಷತ್ವದ ಬಗ್ಗೆ ಇತರರ ಅಭಿಪ್ರಾಯ**

೧. ಐತರೇಯ ಬ್ರಾಹ್ಮಣಕ್ಕೆ ಅನೇಕ ವಿದ್ವಾಂಸರು ವ್ಯಾಖ್ಯಾನ ಮಾಡಿದ್ದಾರೆ. ಅದರಲ್ಲಿ (ಷಡ್ಗುರು) ಸದ್ಗುರುಶಿಷ್ಯ ಎನ್ನುವವರು ಒಬ್ಬರು. ಅವರು ಬ್ರಾಹ್ಮಣದ 'ತಸ್ಮಾದೇಕಸ್ಯ ಬಹ್ವ್ಯಃ ಜಾಯಾ ಭವಂತಿ ನೈಕಸ್ಯೈ ಬಹವಃ ಸಹ ಪತಯಃ' ಎನ್ನುವ ವಾಕ್ಯಕ್ಕೆ ವ್ಯಾಖ್ಯಾನ ಮಾಡುವಾಗ ದ್ರೌಪದಿಯ ಬಗ್ಗೆ ಹೀಗೆ ವಿವರಿಸಿದ್ದಾರೆ.

ಏಕಸ್ಯ ಭರ್ತುರ್ಭಾರ್ಯಾಃ ಸ್ಯುಃ ಬಹ್ವ್ಯಃ ಏಕತ್ರ ಜನ್ಮನಿ ।
ನೈಕಸ್ಯಾಃ ಸ್ಯುಶ್ಚ ಭರ್ತಾರೋ ಬಹವಸ್ತ್ವೇಕಜನ್ಮನಿ ॥

ಏಕಜನ್ಮನಿ ಯತ್ ಕಾಚಿದ್ ಋಷೀನ್ ಭೇಜೇ ಪ್ರಚೇತಸಃ ।
ಭರ್ತೄನ್ ದಶ ತಥಾ ಯಚ್ಚ ದ್ರೌಪದೀ ಪಂಚ ಪಾಂಡವಾನ್ ॥

ಯುಕ್ತಂ ತದ್ದೇಹಭೇದೇನ ಶಂಭೋಶ್ಚ ವರದಾನತಃ ।
''ತೇಷಾಂ ತೇಜೋವಿಶೇಷೇಣ ಪ್ರತ್ಯವಾಯೋ ನ ವಿದ್ಯತೇ ॥

ತದನ್ವೀಕ್ಷ್ಯ ಪ್ರಯುಂಜಾನಃ ಸೀದತ್ಯವರಃ'' ಇತ್ಯಪಿ ।
ಸ್ಮರ್ಯತೇ ತದಿಹ ಪ್ರೋಕ್ತಂ ಅವಿಶಂಕ್ಯಂ ವಿದುರ್ಬುಧಾಃ ॥

ಇದರ ತಾತ್ಪರ್ಯ- ಒಂದು ಜನ್ಮನಿ ಗಂಡಸಿಗೆ ಅನೇಕ ಜನ ಹೆಂಡರಿಯರು ಇರಬಹುದು. ಆದರೆ ಒಂದು ಜನ್ಮದಲ್ಲಿ ಹೆಂಗಸಿಗೆ ಅನೇಕ ಜನ ಗಂಡಂದಿರು ಇರಲು ಸಾಧ್ಯವಿಲ್ಲ. ಆದರೆ ಮಾರಿಷಾ ಹತ್ತು ಜನ ಪ್ರಚೇತಸರನ್ನು, ದ್ರೌಪದಿ ಐದು ಜನ ಪಾಂಡವರನ್ನು ಮದುವೆ ಆದದ್ದು ಕಂಡಿದೆ. ಇಲ್ಲಿ ದ್ರೌಪದಿ ಅನೇಕರನ್ನು ಮದುವೆ ಆದದ್ದು ಯುಕ್ತವೇ ಆಗಿದೆ. ಏಕೆಂದರೆ ಬೇರೆ ಬೇರೆ ದೇಹದಿಂದ ಆಗಿದ್ದಾಳೆ. ರುದ್ರದೇವರ ವರವಿರುವದರಿಂದ ಅದು ಅವರಿಗೆ ದೋಷವಲ್ಲ. ಅದಲ್ಲದೆ ಸ್ಮೃತಿಯಲ್ಲಿ 'ಪಾಂಡವರು ಮಹಾಜ್ಞಾನಿಗಳು. ತಪಸ್ವಿಗಳು. ಆದ್ದರಿಂದ ಅವರಿಗೆ ಪಾಪ ತಟ್ಟುವುದಿಲ್ಲ. ಅವರಂತೆ ಪ್ರಾಕೃತರಾದ ಜನ ಮಾಡಿದರೆ ನರಕಾದಿಗಳನ್ನು ಹೊಂದಬೇಕಾಗುತ್ತದೆ ಆದ್ದರಿಂದ ಮಾಡಬಾರದು' ಎಂದು ಇದೆ. ಆದ್ದರಿಂದ ಒಬ್ಬ ದ್ರೌಪದಿಯನ್ನು ಪಂಚ ಪಾಂಡವರು ಮದುವೆ ಆದದ್ದು ದೋಷವಲ್ಲ.

೨. ಮಹಾಭಾರತಕ್ಕೆ ವ್ಯಾಖ್ಯಾನಕಾರರಲ್ಲಿ ನೀಲಕಂಠ ಚತುರ್ಧರ ಪ್ರಸಿದ್ಧರಾದವರು. ಗೋದಾವರೀ ತೀರದ ಮರಾಠಿ ದೇಶಸ್ಥ ಬ್ರಾಹ್ಮಣ. ಅವರು ೧೭ ನೇ ಶತಮಾನದ ಉತ್ತರಾರ್ಧದಲ್ಲಿ ಇದ್ದವರು. ಅವರು ತನ್ನ ವ್ಯಾಖ್ಯಾನದಲ್ಲಿ ದ್ರೌಪದಿಯ ಪಂಚಪತಿತ್ವದ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಹೇಳಿದ್ದಾರೆ. ದೀರ್ಘತಮಸ್ಸರ ಕಥೆಗೆ ವ್ಯಾಖ್ಯಾನ ಮಾಡುವಾಗ ಹೇಳಿದ ಮಾತು.

''ಕಥಂ ತರ್ಹಿ ದ್ರೌಪದ್ಯಾಃ ಪಂಚ ಪಾಂಡವಾಃ ಮಾರಿಷಾಯಾಃ ದಶ ಪ್ರಾಚೇತಸಃ ಇದಾನೀಂತನಾನಾಂ ನೀಚಾನಾಂ ದ್ವಿತ್ರಾದಯಃ ಪತಯಃ ದೃಶ್ಯಂತ ಇತಿ ಚೇನ್ನ, ನ ದೇವಚರಿತಂ ಚರೇತ್ ಇತಿ ನ್ಯಾಯೇನ ದೇವತಾಕಲ್ಪೇಷು ಪರ್ಯನುಯೋಗಾಯೋಗಾತ್ । ನೀಚಾನಾಂ ಪಶುಪ್ರಾಯಾಣಾಮಾಚಾರಸ್ಯ ಅಪ್ರಾಮಾಣ್ಯಾಚ್ಚ । ಅಧಿಕಾರಿವಿಷಯತ್ವಾಚ್ಚ ನಿಯೋಗಸ್ಯ ಇತಿ ದಿಕ್''

ದೀರ್ಘತಮಸ್ಸರು ಒಬ್ಬ ಹೆಂಗಸಿಗೆ ಒಬ್ಬನೇ ಗಂಡ ಇರಬೇಕು. ಇಲ್ಲದೇ ಹೋದರೆ ಆಕೆಗೆ ನರಕಾದಿ ಅನರ್ಥವಾಗುತ್ತದೆ ಎಂದು ನಿಯಮವನ್ನು ಮಾಡಿದರು. ಆಗ ಪ್ರಶ್ನೆ ಉದ್ಭವಿಸುತ್ತದೆ. ದ್ರೌಪದಿ ಐವರಿಗೆ ಮಡದಿ ಆಗಿದ್ದಾಳೆ. ಚಂದ್ರನ ಕುವರಿ ಮಾರಿಷಾ ಹತ್ತು ಜನ ಪ್ರಾಚೇತಸರ ಅರ್ಧಾಂಗಿನಿ. ಅಲ್ಲದೆ ಅನೇಕ ಜನ ಜಗತ್ತಿನಲ್ಲಿ ಬಹುಪತಿಗಳನ್ನು ವಿವಾಹವಾಗಿದ್ದು ಕಾಣುತ್ತೇವೆ. ಅಂದ ಮೇಲೆ ದೀರ್ಘತಮಸ್ಸರ ನಿಯಮ ಹೇಗೆ ಎಂದರೆ ಪಶುಗಳಂತೆ ಪ್ರವರ್ತಿಸುವ ನೀಚರ ಆಚರಣೆ ಅಪ್ರಮಾಣ. ಅದನ್ನು ಅನುಸರಿಸುವ ಕಾರಣವಿಲ್ಲ. ಆದರೆ 'ನ ದೇವಚರಿತಂ ಚರೇತ್' ಎಂಬ ನಿಯಮವಿರುವದರಿಂದ ದೇವಗಳು ಹೇಳಿದ ನಿಯಮಗಳನ್ನು ಪಾಲಿಸಬೇಕೆ ವಿನಃ ಅವರು ಮಾಡಿದಂತೆ ಪ್ರಾಕೃತರಾದ ನಾವು ಮಾಡಬಾರದು. ದ್ರೌಪದಿ-ಪಾಂಡವರು, ಮಾರಿಷಾ-ಪ್ರಾಚೇತಸರು ದೇವತುಲ್ಯರು. ಆದ್ದರಿಂದ ಅವರ ಆಚಾರದ ಬಗ್ಗೆ ಪ್ರಶ್ನಿಸಿ ಆಕ್ಷೇಪಿಸಬಾರದು. ಅಲ್ಲದೆ ದ್ರೌಪದ್ಯಾದಿಗಳು ಅಧಿಕಾರಿಗಳು ಅವರಿಗೆ ಅನೇಕ ಪತಿತ್ವ ಆದೇಶವಿದೆ ಆದ್ದರಿಂದ ಪಾಪವಿಲ್ಲ.

೩. ಪ್ರಸಿದ್ಧ ಮೀಮಾಂಸಕನಾದ ಖಂಡದೇವ (೧೬೪೫-೧೬೭೫) ತನ್ನ ಮೀಮಾಂಸಾಕೌಸ್ತುಭ ಎಂಬ ಗ್ರಂಥದಲ್ಲಿ ಶಿಷ್ಟಾಕೋಪಾಧಿಕರಣವ್ಯಾಖ್ಯಾನ ಸಂದರ್ಭದಲ್ಲಿ - ದ್ರೌಪದಿಪರಿಣಯಸ್ತು ಪಂಚಾನಾಂ ದ್ರೌಪದ್ಯಾ ವೇದಿಮಧ್ಯೋತ್ಪತ್ತಿಕತ್ವೇನ ಅಮಾನುಷೀತ್ವಾತ್, ತಸ್ಯಾ ಶ್ರಿಯೋಽಂಶತ್ವಾತ್ ಶ್ರಿಯಶ್ಚ ಸರ್ವೋಪಭೋಗೇಽಪಿ ಬಾಧಕಾಭಾವಾತ್, ಈಶ್ವರೇಣ ಚ 'ಪಂಚ ತೇ ಪತಯೋ ಭವಿಷ್ಯಂತಿ' ಇತಿ ವರದಾನೇನ, ಪ್ರತಿಸಂಗಮಂ ಚ ಕನ್ಯಾತ್ವಪ್ರಾರ್ಥನಾಚ್ಚಾದೋಷ ಇತಿ ವ್ಯಾಸೇನೈವ ಸ್ಪಷ್ಟೀಕೃತಮ್ ।

೪.ಕ್ಷೇಮೇಂದ್ರ (೯೯೦-೧೦೭೦) ತನ್ನ ದಶಾವತಾರ ಚರಿತೆಯಲ್ಲಿ ಕೃಷ್ಣಾವತಾರವನ್ನು ನಿರೂಪಣೆ ಮಾಡುವ ಪ್ರಸಂಗದಲ್ಲಿ ಹೀಗೆ ಹೇಳುತ್ತಾನೆ.

ಪಂಚೇಂದ್ರಾ ಸಮದಾಃ ಪೂರ್ವಂ ಕ್ರುದ್ಧಾಃ ಬದ್ಧಾಃ ಪಿನಾಕಿನಾ ।
ತ ಏವ ಪಾಂಡವಾ ಜಾತಾಃ ಸ್ವರ್ಗಶ್ರೀಸ್ತವ ಚಾತ್ಮಜಾ ॥
ತೇಷಾಮೇಕೈವ ಸಾ ಪತ್ನೀ ನೈವಾಯಂ ಧರ್ಮಸಂಕರಃ ॥

ಸೊಕ್ಕಿನಿಂದ ಐವರು ಇಂದ್ರರು ಪುರಾರಿಗೆ ಅವಮಾನ ಮಾಡಿದರು. ಸಿಟ್ಟಿನಿಂದ ಸದಾಶಿವ ಅವರನ್ನು ಬೆಟ್ಟದ ಅಡಿಯಲ್ಲಿ ಬಂಧಿಸಿದನು. ಅವರೊಡನೆ ಈಗಿನ ಇಂದ್ರ ಸೇರಿ ಐವರು ಪಾಂಡವರಾಗಿ ಜನಿಸಿದರು. ಸಗ್ಗದ ಸಿರಿ ನಿನ್ನ ಮಗಳಾಗಿ ಜನಿಸಿದ್ದಾಳೆ. ಅವರೆಲ್ಲರಿಗೂ ಇವಳೊಬ್ಬಳೇ ಸತಿಯಾಗುತ್ತಾಳೆ. ಹೀಗೆ ವರವಿರುವ ಕಾರಣ ಧರ್ಮನಾಶವಾಗುವುದಿಲ್ಲ.

ಕ್ಷೇಮೇಂದ್ರ ತನ್ನ ಭಾರತಕಥಾಮಂಜರಿಯಲ್ಲಿಯೂ ಮೇಲೆ ಹೇಳಿದಂತೆಯೇ ಕಥೆಯನ್ನು ವಿಸ್ತಾರವಾಗಿ ನಿರೂಪಣೆಯನ್ನು ಮಾಡಿದ್ದಾನೆ.

೫. ಅನಂತಭಟ್ಟ ತನ್ನ ಚಂಪೂ ಭಾರತದಲ್ಲಿ 'ಅನ್ಯೇದ್ಯುಃ ಗೃಹಮುಪನೀಯ ಪೂಜಿತಾಂಸ್ತಾನ್ ವ್ಯಾಸೋಕ್ತ್ಯಾ ವಿದಿತವರಃ ಪುರಾಮರಾತೇಃ' ಎಂದು ನಾಲಾಯನೀ ಜನ್ಮದಲ್ಲಿ ರುದ್ರದೇವರು 'ಐವರು ಪತಿಗಳಾಗಲಿ' ಎಂದು ವರವನ್ನು ಕೊಟ್ಟ ವಿಷಯವನ್ನು ತಿಳಿದು ಐವರಿಗೆ ದ್ರೌಪದಿಯನ್ನು ಧಾರೆಯೆರೆದನು ಎಂದು ಹೇಳುತ್ತಾನೆ.

ಈ ಮೇಲಿನ ವಿಷಯಗಳನ್ನು ನೋಡಿದಾಗ ವಿಚಾರ ಮಾಡಿದಾಗ ಇಷ್ಟು ಹೇಳಬಹುದು. ದ್ರೌಪದಿಗೆ ಐವರು ಪತಿಗಳು. ಅದಕ್ಕೆ ಕಾರಣ ಅವಳೇ. ನಳನ ಮಗಳಾದ ಇಂದ್ರಸೇನಾ ಜನ್ಮದಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿ ರುದ್ರದೇವರು ದರ್ಶನವಿತ್ತಾಗ ಐದು ಬಾರಿ 'ಪತಿಂ ದೇಹಿ' ಎಂದು ಕೇಳಿದ್ದು. ಅದಕ್ಕೆ ತಕ್ಕಂತೆ ರುದ್ರದೇವರು ನಿನಗೆ ಮುಂದಿನ ಜನ್ಮದಲ್ಲಿ ಐವರು ಗಂಡಂದಿರು ಆಗಲಿ ಎಂಬ ವರ. ರುದ್ರದೇವರ ವರವೇ ಧರ್ಮನಾಶವಾಗದೇ ಇರುವದಕ್ಕೆ ಕಾರಣ. ಇದು ಮುಖ್ಯಕಾರಣ. ಇದು ಮಹಾಭಾರತ-ಟಿಪ್ಪಣಿಕಾರನಾದ ನೀಲಕಂಠ, ಖಂಡದೇವ, ಕ್ಷೇಮೇಂದ್ರ, ಅನಂತಭಟ್ಟ ಇವರುಗಳ ಅಭಿಪ್ರಾಯ.

### ದ್ರೌಪದಿಯ ನಿರ್ದೋಷತ್ವದ ಬಗ್ಗೆ ಪುರಾಣಗಳ ಅಭಿಪ್ರಾಯ

೧. ಆಕರ್ಣಯ ಮುನೇ ಪೂರ್ವಂ ಪಂಚವಕ್ತ್ರೋ ಹರಃ ಸ್ವಯಮ್ ।
ಪೃಥಿವ್ಯಾಂ ಪಂಚಧಾ ಭೂತ್ವಾ ಪ್ರಾದುರಾಸೀದ್ ಜಗದ್ಧಿತಃ ॥
ಉಮಾಪಿ ಚ ಜಗದ್ಧಾತ್ರೀ ದ್ರುಪದಸ್ಯ ಮಹೀಭುಜಃ ।
ಯಜತೋ ವಹ್ನಿಕುಂಡಾಚ್ಚ ಪ್ರಾದುಶ್ಚಕ್ರೇಽತಿಸುಂದರೀ ॥

ಪಂಚಾಪಿ ಪಾಂಡುತನಯಾಃ ಸಾಕ್ಷಾದ್ರುದ್ರವಪುರ್ಧರಾಃ ।
ಅವತೇರುರಿಹ ಸ್ವರ್ಗಾದ್ ದುಷ್ಟಸಂಹಾರಕಾರಕಾಃ ॥ ಸ್ಕಾಂದಪುರಾಣ.ಕಾಶೀಖಂಡ.೪೯.೩-೫

ಸ್ಕಾಂದಪುರಾಣದ ಪ್ರಕಾರ ಪಂಚಪಾಂಡವರು ಐದು ಮೊಗದ ರುದ್ರದೇವರ ಅವತಾರ. ಮಹಾದೇವ ತಾನು ಐದು ರೂಪಗಳಿಂದ ಪಂಚ ಪಾಂಡವರಾಗಿ ಅವತರಿಸಿದನು. ಅವನ ಮಡದಿ ಪಾರ್ವತಿ ದ್ರುಪದರಾಜನ ಯಜ್ಞಕುಂಡದಿಂದ ತಾನು ಹುಟ್ಟಿಬಂದಳು. ಐದು ಜನ ಪಾಂಡವರೂ ರುದ್ರದೇವರ ಅವತಾರವೇ ಎಂದು ಸ್ಕಾಂದಪುರಾಣದಲ್ಲಿದೆ. ಇಲ್ಲಿ ದ್ರೌಪದಿಯ ಪಂಚ ಪತಿತ್ವದ ಪ್ರಶ್ನೆ ಬಂದಿಲ್ಲ ಅದಕ್ಕಾಗಿ ಹೊರಟದ್ದೂ ಅಲ್ಲ. ಆದರೂ ಪ್ರಸಂಗವಶಾತ್ ಹೇಳುವಾಗ ಹೇಳಿದ್ದಾರೆ. ಐದು ಜನ ಪಾಂಡವರು ರುದ್ರಾವತಾರ ಅಂದ ಮೇಲೆ ಅವರೆಲ್ಲರಿಗೂ ಒಬ್ಬಳೇ ಪಾರ್ವತಿ ಮಡದಿ ಆದರೆ ದೋಷವಿಲ್ಲ.ಎಂದು ಇದರ ಅಭಿಪ್ರಾಯ ಎಂದು ಹೇಳಬಹುದು.

೨. ಪಂಚಧಾ ಭಗವಾನಿತ್ಥಂ ಅವತೀರ್ಣಃ ಶತಕ್ರತುಃ ।
ತಸ್ಯೋತ್ಪನ್ನಾ ಮಹಾಭಾಗಾ ಪತ್ನೀ ಕೃಷ್ಣಾ ಹುತಾಶನಾತ್ ॥

ಶಕ್ರಸ್ಯೈಕಸ್ಯ ಸಾ ಪತ್ನೀ ಕೃಷ್ಣಾ ನಾನ್ಯಸ್ಯ ಕಸ್ಯಚಿತ್ ।
ಯೋಗೀಶ್ವರಾ ಶರೀರಾಣಿ ಕುರ್ವಂತಿ ಬಹುಲಾನ್ಯಪಿ ॥
ಪಂಚಾನಾಮೇಕಪತ್ನೀತ್ವಮಿತ್ಯೇತತ್ ಕಥಿತಂ ತವ ॥ ---- ಮಾರ್ಕಂಡೇಯಪುರಾಣ. ೫.೨೩-೨೬

ಮಾರ್ಕಂಡೇಯ ಪುರಾಣದಲ್ಲಿ ದ್ರೌಪದಿಗೆ ಪಂಚ ಪತಿಗಳು ಏಕೆ ಎನ್ನುವ ಜಿಜ್ಞಾಸೆಗೆ ಉತ್ತರವನ್ನಿತ್ತಿದ್ದಾರೆ. 'ಧರ್ಮರಾಜ, ವಾಯುದೇವರು, ಅಶ್ವಿನೀದೇವತೆಗಳಲ್ಲಿ ಹೊಕ್ಕ ಇಂದ್ರದೇವರ ಧರ್ಮ, ಬಲ, ರೂಪ ಹಾಗು ಲಾವಣ್ಯಗಳು ಇಲ್ಲಿ ಧರ್ಮರಾಜ, ಭೀಮ, ನಕುಲಸಹದೇವರಾಗಿ ಹುಟ್ಟಿದ್ದಾರೆ. ಇಂದ್ರದೇವರು ಸಾಕ್ಷಾತ್ ಅರ್ಜುನನಾಗಿ ಹುಟ್ಟಿದ್ದಾರೆ. ಆದ್ದರಿಂದ ಇಂದ್ರದೇವರೇ ಐದು ರೂಪದಿಂದ ಅವತರಿಸಿದ್ದಾರೆ. ಇಂದ್ರದೇವರ ಸಹಧರ್ಮಿಣಿಯಾದ ಶಚೀದೇವಿ ದ್ರೌಪದಿಯಾಗಿ ಅವತರಿಸಿದಳು. ಯೋಗೀಶ್ವರರು ಅನೇಕ ರೂಪವನ್ನು ಧರಿಸುತ್ತಾರೆ. ಆದ್ದರಿಂದ ಇಂದ್ರದೇವರು ಐದು ರೂಪಧರಿಸಿರುವದರಿಂದ ಐವರು ಪಾಂಡವರಿಗೆ ಒಬ್ಬಳೇ ದ್ರೌಪದಿ ಮಡದಿ ಆಗುವುದು ದೋಷಕಾರಿ ಅಲ್ಲ' ಎಂದು ದ್ರೌಪದಿಯ ಪಂಚಪತಿತ್ವದ ಸಮಾಧಾನ ಹೇಳಿದ್ದಾರೆ.

೩. ಬೃಹನ್ನಾರದೀಯಪುರಾಣಾಂತರ್ಗತ ಅಧಿಕ ಮಾಸ ಮಾಹಾತ್ಮ್ಯದಲ್ಲಿ ಅಧಿಕ ಮಾಸದ ಧರ್ಮಗಳನ್ನು ತಿರಸ್ಕರಿಸಿದ್ದರಿಂದ ಋಷಿಕನ್ಯೆಗೆ ಐವರು ಗಂಡಂದಿರಾದರು. ಅಲ್ಲದೆ ಅನೇಕ ದುಃಖಗಳನ್ನು ಅನುಭವಿಸಬೇಕಾಯಿತು ಎಂದು ಹೇಳಿದ್ದಾರೆ.

೪. ಇನ್ನು ಮಹಾಭಾರತವನ್ನು ಸ್ಥೂಲವಾಗಿ ಅಧ್ಯಯನ ಮಾಡಿದಾಗ ರುದ್ರದೇವರ ವರದಿಂದಾಗಿ ಐವರು ಗಂಡಂದಿರು ಎಂದು ಸಿದ್ಧಾವಾಗುತ್ತದೆ.

೫. ಗರುಡಪುರಾಣಾಂತರ್ಗತವಾದ ಬ್ರಹ್ಮಕಾಂಡದಲ್ಲಿ ಮಾತ್ರ ವಿಸ್ತಾರವಾಗಿ ದ್ರೌಪದಿಯಲ್ಲಿ ಐದು ದೇವಿಯ ಸನ್ನಿಧಾನ, ಅದಕ್ಕೆ ಕಾರಣ ಮುಂತಾದವುಗಳನ್ನು ನಿರೂಪಿಸಿದ್ದಾರೆ.

ಅಲ್ಲದೇ ವೇದದಲ್ಲಿ ಪುರಾಣಗಳಲ್ಲಿ ಹೇಳಿದಂತೆ ದ್ರೌಪದಿಯ ಪಂಚಪತಿತ್ವದ ಕಾರಣವನ್ನು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ವಿವರಿಸಿದ್ದೇವೆ ಹಾಗು ಹಿಂದೆ ನಿರೂಪಣೆ ಮಾಡಿದ ಎಲ್ಲ ವಿಷಯಗಳು

ವೇದದಲ್ಲಿ, ಪುರಾಣದಲ್ಲಿ ಹಾಗು ಮಹಾಭಾರತದಲ್ಲಿ ವಿವರಿಸಿದ್ದಾರೆ ಎಂದು ಶ್ರೀಮದಾಚಾರ್ಯರು ದ್ರೌಪದಿನಿರ್ಣಯವನ್ನು ಬರೆದು ಕೊನೆಯಲ್ಲಿ ಹೇಳಿದ್ದಾರೆ.

> ವೇದೇಷು ಸಪುರಾಣೇಷು ಭಾರತೇ ಚಾಪಗಮ್ಯತೇ ।
> ಉಕ್ತೋsರ್ಥಃ ಸರ್ವ ಏವಾಯಂ ತಥಾ ಪೂರ್ವೋದಿತಾಶ್ಚ ಯೇ ॥ ಮ.ತಾ.ನಿ.೧೮.೧೩೯

**ಪಂಚ ಪಾಂಡವರು ಮತ್ತು ದ್ರೌಪದಿಯ ಸಂಬಂಧ**

ಐವರು ಪಾಂಡವರ ಒಬ್ಬ ಮಡದಿ ದ್ರೌಪದಿ. ದ್ರೌಪದಿಯ ಜೊತೆಗೆ ಐವರು ಹೇಗೆ ಸಂಸಾರ ಮಾಡಿದರು. ಇದು ದೊಡ್ಡ ಸಮಸ್ಯೆ. ಐವರ ಮಡದಿ ಪತಿವ್ರತೆ ಹೇಗೆ ? ಈ ಎಲ್ಲ ಪ್ರಶ್ನೆಗಳಿಗೆ ವೇದವ್ಯಾಸದೇವರ ಅಭಿಪ್ರಾಯವನ್ನು ವಿವರಿಸಿ ಉತ್ತರಿಸಿದವರು ಶ್ರೀಮದಾಚಾರ್ಯರು. ಭಗವಾನ್ ವೇದವ್ಯಾಸರು ದ್ರೌಪದಿಯ ಬಗ್ಗೆ ಮಹಾಭಾರತದ ಆದಿಪರ್ವದಲ್ಲಿ ಹೀಗೆ ಹೇಳಿದ್ದಾರೆ.

> ಇದಂ ಚ ತತ್ರಾದ್ಭುತರೂಪಮುತ್ತಮಂ ಜಗಾದ ದೇವರ್ಷಿರತೀತಮಾನುಷಮ್ ।
> ಮಹಾನುಭಾವಾ ಕಿಲ ಸಾ ಸುಮಧ್ಯಮಾ ಬಭೂವ ಕನ್ಯೈವ ಗತೇ ಗತೇsಹನಿ ॥ ಆದಿ.೨೧೫.೨೪

ದೇವರ್ಷಿಗಳಾದ ನಾರದರು ದ್ರೌಪದಿಯ ಬಗ್ಗೆ ಅದ್ಭುತವಾದ ಅತಿಮಾನುಷವಾದ ವಿಷಯವನ್ನು ಜಗತ್ತಿನಲ್ಲಿ ಪ್ರಕಟಿಸಿದರು. ಮಹಾನುಭಾವಳಾದ ದ್ರೌಪದಿದೇವಿ ಪ್ರತಿದಿನವೂ ಕನ್ಯಾ ಆಗುತ್ತಿದ್ದಳು. ಇದರ ವಿವರಣೆಯನ್ನು ಮ.ತಾ.ನಿ ಅಧ್ಯಾಯ 19 ರಲ್ಲಿ ಮಾಡಿದ್ದಾರೆ.

> ಊಷುಸ್ತಥೈವ ಪರಿವತ್ಸರಪಂಚಕಂ ತೇ ಪಾಂಡೋರ್ಗೃಹೇ ಸುಸುಖಿನೋsಖಿಲಭೋಗಯುಕ್ತಾಃ ।
> ಕೃಷ್ಣಾ ಚ ತೇಷು ಪೃಥಗೇವ ಚತುಸ್ಸ್ವರೂಪಾ ರೇಮೇ ತಥೈಕತನುರಪ್ಯಭಿಮಾನಿಭೇದಾತ್ ॥೧೮೩॥

ಪಾಂಡವರು ದ್ರೌಪದಿಯ ವಿವಾಹವನ್ನು ಮಾಡಿಕೊಂಡು ಹಸ್ತಿನಾವತಿಗೆ ಬಂದು, ಅಲ್ಲಿ ಬಾರ್ಹಸ್ಪತ್ಯ ಮಾನರೀತ್ಯಾ ಐದು ವರ್ಷಗಳ ಕಾಲ ಎಲ್ಲ ಭೋಗಗಳನ್ನು ಅನುಭವಿಸುತ್ತಾ ಸುಖವಾಗಿ ವಾಸ ಮಾಡಿದರು. ದ್ರೌಪದಿ ಪ್ರತಿದಿನ ಒಬ್ಬೊಬ್ಬರೊಡನೆ ವಿಹಾರವನ್ನು ಮಾಡಿದಳು. ಜಗತ್ತಿನಲ್ಲಿ ಒಬ್ಬ ಸ್ತ್ರೀ ಅನೇಕ ಪುರುಷರ ಜೊತೆ ಹೇಗೆ ವಿಹಾರ ಮಾಡಿದಳು ಅಂದರೆ ಚತುಸ್ಸ್ವರೂಪಳಾದ ದ್ರೌಪದಿ ಪಂಚ ಪಾಂಡವರೊಡನೆ ಇರುತ್ತಿದ್ದಳು. ಆದ್ದರಿಂದ ದೋಷವಿಲ್ಲ. ದ್ರೌಪದಿ ನಾಲ್ಕು ಸ್ವರೂಪಳಿರಬಹುದು ಆದರೆ ದ್ರೌಪದಿ ದೇಹ ಒಂದೇ ಇರುವಾಗ ಒಬ್ಬ ಪುರುಷನ ಸಂಪರ್ಕವಾದದರ ಜೊತೆ ಇನ್ನೊಬ್ಬರು ಹೇಗೆ ವಿಹಾರ ಮಾಡಿದರು ಅಂದರೆ ಹೌದು ದ್ರೌಪದಿಯ ದೇಹ ಒಂದೇ ಇರುತ್ತಿತ್ತು. ಆದರೂ ಪ್ರತಿದಿನ ಆ ಶರೀರದ ಅಭಿಮಾನಿಗಳು ಬೇರೆ ಬೇರೆ ಇರುತ್ತಿದ್ದರು. ಆದ್ದರಿಂದ ದೇಹವೂ ಭಿನ್ನವಾಯಿತು. ಆದ್ದರಿಂದ ಹಿಂದಿನ ದಿನ ಇನ್ನೊಬ್ಬರಿಂದ ಭುಕ್ತವಾದ ಶರೀರವನ್ನು ಮಾರನೇ ದಿನ ಮತ್ತೊಬ್ಬರು ಭೋಗ ಮಾಡಲಿಲ್ಲ.

> ಕನ್ಯೈವ ಸಾಭವದತಃ ಪ್ರತಿವಾಸರಂ ಚ ಜನ್ಮಾಭವತ್ ಹ್ಯಭಿಮತೇಃ ಪೃಥಗೇವ ನಾಶಾತ್ ।
> ಪ್ರಾಯೋ ಹಿ ನಾಭಿಮತಿನಾಶಮವಾಪ ವಾಣೀ ತಸ್ಮಾನ್ನರುಚ್ಚ ಸಕಲೇಷ್ವಭಿವಿಷ್ಟ ಆಸೀತ್ ॥೧೮೪॥

ದ್ರೌಪದಿ ದೇಹಕ್ಕೆ ಪ್ರತಿದಿನ ಅಭಿಮಾನಿಗಳು ಬೇರೆ ಬೇರೆ ಆಗಲಿ. ಆದರೂ ಹಿಂದಿನ ದಿನ ಒಬ್ಬರಿಂದ ಪರಾಮೃಷ್ಟವಾದ ಶರೀರದ ಜೊತೆ ಮಾರನೇ ದಿನ ಮತ್ತೊಬ್ಬರು ಹೇಗೆ ವಿಹರಿಸಿದರು. ಇದಕ್ಕೆ ಉತ್ತರ. ಹಿಂದಿನ ದಿನ ಯಾರಿಗೆ ಅಭಿಮಾನವು ಇರುತ್ತಿತ್ತೋ ಅವರಿಗೆ ಮಾರನೇ ದಿನ ಅಭಿಮಾನ ನಾಶವಾಗುತ್ತಿತ್ತು.

ಮತ್ತೊಬ್ಬರಿಗೆ ಅಭಿಮಾನ ಹುಟ್ಟುತ್ತಿತ್ತು. ಆದ್ದರಿಂದ ಪ್ರಸಿದ್ಧಜನ್ಮದಂತೆ ಪ್ರತಿದಿನವೂ ಜನ್ಮವಾಗುತ್ತಿತ್ತು. ಆದ್ದರಿಂದ ಪ್ರತಿದಿನವೂ ದ್ರೌಪದಿ ಕನ್ಯೆ ಆಗಿಯೇ ಇರುತ್ತಿದ್ದಳು.

ಉದಾ- ಧರ್ಮರಾಜನ ಜೊತೆ ದ್ರೌಪದಿ ಇರುವ ದಿನ ದ್ರೌಪದಿ ದೇಹದ ಮೇಲೆ ಶ್ಯಾಮಲಾ ದೇವಿಗೆ ಅಭಿಮಾನ ಬರುತ್ತಿತ್ತು. ಮಾರನೇ ದಿನ ಶ್ಯಾಮಲಾದೇವಿ ಅಭಿಮಾನ ನಾಶವಾಗುತ್ತಿತ್ತು. ಭೀಮಸೇನನ ಜೊತೆ ದ್ರೌಪದಿ ಇರುವಾಗ ಭಾರತೀದೇವಿಗೆ ಮಾತ್ರ ಅಭಿಮಾನ ಇರುತ್ತಿತ್ತು. ಉಳಿದವರಿಗೆ ಅಭಿಮಾನ ನಾಶವಾಗುತ್ತಿತ್ತು . ಮಾರನೇ ದಿನ ಶಚೀದೇವಿಗೆ ಅಭಿಮಾನ ಬರುತ್ತಿತ್ತು. ನಂತರ ಉಷಾದೇವಿಗೆ ಅಭಿಮಾನ. ಹೀಗೆ ಪ್ರತಿದಿನ ಒಬ್ಬಬ್ಬರಿಗೆ ಅಭಿಮಾನೋತ್ಪತ್ತಿ ಮತ್ತು ಅಭಿಮಾನ ನಾಶ.

ಮೇಲಿನಂತೆ ಪ್ರತಿದಿನದ ಪ್ರಕ್ರಿಯೆ ಇದ್ದರೂ ಭಾರತಿಗೆ ಪ್ರಾಯಃ ಅಭಿಮಾನನಾಶ ಆಗುತ್ತಿರಲಿಲ್ಲ. ಆದ್ದರಿಂದ ವಾಯುದೇವರು ಧರ್ಮರಾಜಾದಿ ನಾಲ್ಕು ಜನರಲ್ಲಿ ಪ್ರವೇಶ ಮಾಡಿದ್ದರು.

> ಧರ್ಮಾತ್ಮಜಾದಿಷು ಮರುತ್ತ್ವಿವಿಷ್ಟ ಏಷಾಂ ಬುದ್ಧಿಂ ವಿಮೋಹ್ಯ ರಮತೇ ಸತತಂ ತಯಾ ಯತ್ ।
> ಶುದ್ಧೈವ ಸಾ ಹಿ ತತ ಏವ ದಿನೇ ದಿನೇ ಚ ಸಂಮೋಹತೋ ಮರಣವತ್ ಭವತೀಹ ಕನ್ಯಾ ॥೧೮೫॥

ಧರ್ಮರಾಜಾದಿಗಳಲ್ಲಿ ವಾಯುದೇವರು ದ್ರೌಪದಿಯ ಸಲುವಾಗಿ ಪ್ರವೇಶ ಮಾಡಿದ್ದಾರೆ ಅಂತ ಆದರೆ ಧರ್ಮರಾಜಾದಿಗಳು ವಾಯುದೇವರ ಜೊತೆಗೆ ದ್ರೌಪದಿ ಸಹವಾಸ ಮಾಡಿದರು ಅಂತ ಆಗುತ್ತದೆ. ಒಂದೇ ದೇಹದಲ್ಲಿ ಇಬ್ಬರು ಇರುವಾಗ ಒಬ್ಬರಿಗೆ ಭಾರತಿ ಸ್ಪರ್ಶವಾಗಿದೆ. ಇನ್ನೊಬ್ಬರಿಗೆ ಆಗಿಲ್ಲ ಎಂದು ಹೇಗೆ ಹೇಳುವುದು. ಈ ಸಂಶಯಕ್ಕೆ ಹೀಗೆ ಸಮಾಧಾನವನ್ನು ಹೇಳಿದ್ದಾರೆ. ಧರ್ಮರಾಜಾದಿಗಳಲ್ಲಿ ಪ್ರವೇಶಿಸಿದ ವಾಯುದೇವರು ಅವರ ಬುದ್ಧಿಯನ್ನು ಭಾರತಿಯ ವಿಷಯದಲ್ಲಿ ಮೋಹಗೊಳಿಸಿ ತಾವೊಬ್ಬರೇ ಭಾರತಿಯ ಸಹವಾಸ ಮಾಡುತ್ತಿದ್ದರು. ಧರ್ಮರಾಜಾದಿಗಳಿಗೆ ತಾವು ತಮ್ಮ ತಮ್ಮ ನಿಯತ ಪತ್ನಿಯ ಜೊತೆಗೆ ಇದ್ದೇವೆ ಎಂದು ಬುದ್ಧಿಯನ್ನು ಹುಟ್ಟಿಸಿ, ಅದರಂತೆ ಭಾರತೀದೇವಿಗೆ ತಾನು ತನ್ನ ನಿಯತ ಪತಿಯಾದ ಭೀಮನ ಜೊತೆಗೆ ಇದ್ದೇನೆ ಎಂಬ ಬುದ್ಧಿಯನ್ನು ಹುಟ್ಟಿಸಿ, ತಾವು ಭಾರತಿಯ ಜೊತೆಗೆ ಇರುತ್ತಿದ್ದರು. ಆದ್ದರಿಂದ ಭಾರತೀದೇವಿಗೆ ಮತ್ತೊಬ್ಬ ಪುರುಷರ ಸಂಪರ್ಕವಾಗದೆ ಶುದ್ಧವಾಗಿಯ ಇದ್ದಳು. ಮರಣಾವಸ್ಥೆಯಲ್ಲಿ ಸಂಪೂರ್ಣವಾಗಿ ಅಭಿಮಾನನಾಶವಾಗುತ್ತದೆ. ಅದರಂತೆ ಶ್ಯಾಮಲಾದಿಗಳಿಗೆ ಪ್ರತಿದಿನವೂ ಅಭಿಮಾನ-ನಾಶವಾಗುತ್ತಿತ್ತು. ಆದ್ದರಿಂದ ಮರಣದಂತೆ. ಪ್ರತಿದಿನ ಜನ್ಮದಂತೆ ಹೇಗೆ ಎಂದರೆ. ಎಲ್ಲರಿಗೂ ನವೀನ ಸ್ಥೂಲದೇಹ ಬಂದಾಗ ತಾಯಿಯ ಗರ್ಭದಲ್ಲಿರುವಾಗಲೇ ಆ ದೇಹದ ಮೇಲೆ ಹೊಸದಾಗಿ ಅಭಿಮಾನ ಹುಟ್ಟುತ್ತದೆ. ಅದರಂತೆ ದ್ರೌಪದಿಯ ದೇಹದಲ್ಲಿರುವ ಮತ್ತೊಬ್ಬರಿಗೆ ಹೊಸದಾಗಿ ಅಭಿಮಾನ ಹುಟ್ಟುತ್ತಿತ್ತು. ಆದ್ದರಿಂದ ನವೀನ ಜನನದಂತೆ. ಆ ಕಾರಣ ದ್ರೌಪದಿ ಪ್ರತಿದಿನ ಕನ್ಯಾ ಆಗುತ್ತಿದ್ದಳು.

> ನೋ ಸುಪ್ತಿವತ್ ತ್ವಿದಮತೋಽನ್ಯವಶತ್ವತೋ ಹಿ ದೇಹಸ್ಯ ಸಂಸ್ಮೃತಿತ ಏವ ಹರೇರ್ನ ಮೋಹಃ ।
> ನಾವೇಶವಚ್ಚ ತತ ಏವ ಮೃತೇಃ ಸ್ವರೂಪಮೇತತ್ ತ್ವತಃ ಪ್ರತಿದಿನಂ ಜನನಾದ್ಧಿ ಕನ್ಯಾ ॥೧೮೬॥

ಇಲ್ಲಿ ಪ್ರಶ್ನೆ. ಪಂಚದೇವಿಯರಿಗೆ ಅಭಿಮಾನನಾಶ ಮತ್ತು ಅಭಿಮಾನದ ಉತ್ಪತ್ತಿ ಸುಷುಪ್ತಿ ಮತ್ತು ಮೋಹಾವಸ್ಥೆಯಲ್ಲಿ ಆದಂತೆ ಎಂದಾಗಲಿ ಆದರೆ ಮರಣದಂತೆ ಮತ್ತು ಜನನದಂತೆ ಎಂದಾಗಲಿ ಹೇಳುವುದು ಬೇಡ. ಎಂದರೆ, ಸುಷುಪ್ತಿ ಅವಸ್ಥೆಯಲ್ಲಿ ಅಭಿಮಾನನಾಶವಾಗುವಂತೆ ಎಂದು ಹೇಳಲು ಬರುವದಿಲ್ಲ. ಏಕೆಂದರೆ ಸುಷುಪ್ತಿಯಲ್ಲಿ ದೇಹ ಇನ್ನೊಬ್ಬರ ವಶವಾಗಿರುವದಿಲ್ಲ. ದ್ರೌಪದಿಶರೀರವಾದರೋ ಇನ್ನೊಬ್ಬರ ವಶವಾಗಿರುತ್ತದೆ. ಪ್ರಾಯೋ ಹಿ ನಾಭಿಮತಿನಾಶಮವಾಪ ವಾಣೀ ಎಂದಿರುವದರಿಂದ ಭಾರತಿಗೆ ಪ್ರಾಯಃ

ಅಭಿಮಾನವಿರುತ್ತಿದ್ದರಿಂದ ದೇಹ ಭಾರತಿದೇವಿಯ ವಶವೂ ಆಗಿರುತ್ತಿತ್ತು. ಆದ್ದರಿಂದ ಸುಷುಪ್ತಿಯಲ್ಲಿ ಇದ್ದಂತೆ ಅಭಿಮಾನನಾಶವಲ್ಲ.

ಮೂರ್ಛಾವಸ್ಥೆಯಲ್ಲಿ ದೇಹದ ಮೇಲೆ ಅಭಿಮಾನವಿರುವದಿಲ್ಲ. ಅದರಂತೆ ದ್ರೌಪದಿ ಆಗುತ್ತದೆ ಎಂದೂ ಹೇಳಲು ಬರುವುದಿಲ್ಲ. ಇಲ್ಲಿ ದ್ರೌಪದಿ ದೇಹದಲ್ಲಿ ಇರುವವರಿಗೆ ಪರಮಾತ್ಮನ ಸ್ಮರಣೆ ಇದೆ. ಮೂರ್ಛಾವಸ್ಥೆಯಲ್ಲಿರುವವರಿಗೆ ಸ್ಮರಣೆ ಇರುವದಿಲ್ಲ.

ಪಿಶಾಚಿ ಮುಂತಾದವುಗಳು ದೇಹವನ್ನು ಹೊಕ್ಕಾಗ ಆ ದೇಹದ ಜೀವನಿಗೆ ತನ್ನ ದೇಹದ ಮೇಲೆ ಅಭಿಮಾನವಿರುವದಿಲ್ಲ. ಅದರಂತೆ ದ್ರೌಪದಿ ದೇಹದಲ್ಲಿ ಇರುವವರಿಗೆ ಅಭಿಮಾನನಾಶವನ್ನು ಹೇಳಬಹುದಲ್ಲ ಎಂದರೆ ಹಾಗೂ ಹೇಳಲು ಬರುವುದಿಲ್ಲ. ಏಕೆಂದರೆ ಆ ದೇಹದಲ್ಲಿರುವ ದೇವಿಯರಿಗೆ ಪರಮಾತ್ಮನ ಸ್ಮರಣೆ ಇದೆ.

ಆದ್ದರಿಂದ ದ್ರೌಪದಿ ದೇಹದಲ್ಲಿರುವ ದೇವಿಯರಿಗೆ ಆಗುವ ಅಭಿಮಾನನಾಶ ಸುಷುಪ್ತಿ-ಮೋಹ-ಆವೇಶಗಳಂತೆ ಅಲ್ಲವಾದ್ದರಿಂದ ಮರಣದಂತೆಯೇ ಅಭಿಮಾನನಾಶ ಮತ್ತು ಜನನದಂತೆಯೇ ಅಭಿಮಾನೋತ್ಪತ್ತಿ ಎಂದು ಹೇಳಬೇಕು. ಆದ್ದರಿಂದ ಪ್ರತಿದಿನ ಜನನ ಮರಣವಿರುವದರಿಂದ ದ್ರೌಪದಿ ನಿತ್ಯಕನ್ಯಾ.

> ಏವಂ ಸ ವಾಯುರನುವಿಷ್ಟಯುಧಿಷ್ಠಿರಾದಿಭೀಮಾತ್ಮನೈವ ರಮತೇ ಸತತಂ ತಯೈಕಃ ।
> ಅನ್ಯಾದೃಶಾ ಹಿ ಸುರಭುಕ್ತಿರತೋಽನ್ಯರೂಪಾ ಮಾನುಷ್ಯಭುಕ್ತಿರಿತಿ ನಾತ್ರ ವಿಚಾರ್ಯಮಸ್ತಿ ॥೧೮೭॥

ಯುಧಿಷ್ಠಿರಾದಿಗಳಲ್ಲಿರುವ ಭೀಮಸೇನದೇವರು ಧರ್ಮರಾಜಾದಿಗಳ ಬುದ್ಧಿಯನ್ನು ಮೋಹಗೊಳಿಸಿ ತಾವು ಭಾರತಿಯ ಸಹವಾಸ ಮಾಡುತ್ತಾರೆ ಎಂದಾದರೆ ಧರ್ಮರಾಜಾದಿಗಳಿಗೆ ತಮ್ಮ ಹೆಂಡತಿ ಸಹವಾಸ ಇಲ್ಲವಾದಂತೆ ಆಗುತ್ತದೆ. ಹಾಗಾದರೆ ರುದ್ರದೇವರ ವರ ಸುಳ್ಳಾಗುತ್ತದೆ ಎಂದರೆ ಧರ್ಮಾದಿಗಳಿಗೆ ಭಾರತೀವಿಷಯದಲ್ಲಿ ಮಾತ್ರ ಮೋಹ ಹೊರತು ತಮ್ಮ ಹೆಂಡತಿ ವಿಷಯದಲ್ಲಿ ಅಲ್ಲ. ಹೀಗಾಗಿ ಭೀಮಸೇನದೇವರು ಧರ್ಮರಾಜಾದಿ ಶರೀರದಲ್ಲಿ ತಾವಿದ್ದು ಭಾರತಿಯ ಸಹವಾಸವನ್ನು ತಾವೇ ಮಾಡುತ್ತಿದ್ದರು. ಇಲ್ಲಿ ಜಿಜ್ಞಾಸೆ. ಧರ್ಮರಾಜಾದಿಗಳ ದೇಹದಲ್ಲಿ ಧರ್ಮರಾಜ ಮತ್ತು ವಾಯುದೇವರು, ಅರ್ಜುನನಲ್ಲಿ ಇಂದ್ರ ಮತ್ತು ವಾಯುದೇವರು ಹೀಗೆ ಪ್ರತಿಯೊಬ್ಬರಲ್ಲೂ ಇಬ್ಬರಿದ್ದಾರೆ. ಹಾಗೆ ದ್ರೌಪದಿ ಧರ್ಮರಾಜ ಜೊತೆಗೆ ಇರುವಾಗ ಶ್ಯಾಮಲಾ ಮತ್ತು ಭಾರತೀಗೆ ಅಭಿಮಾನ. ಅರ್ಜುನನ ಜೊತೆಗೆ ಇರುವಾಗ ದ್ರೌಪದಿ ದೇಹದಲ್ಲಿ ಶಚೀ ಮತ್ತು ಭಾರತೀ ಇಬ್ಬರಿಗೆ ಅಭಿಮಾನ. ಹೀಗಿರುವಾಗ ಧರ್ಮರಾಜಾದಿಗಳಿಗೆ ಭಾರತೀ ಸಂಪರ್ಕವಾಗುವದಿಲ್ಲ ಎಂದು ಹೇಗೆ ಹೇಳುವುದು ಎಂದರೆ ದೇವತೆಗಳು ಭೋಗ ಮಾಡುವ ರೀತಿಯೇ ಬೇರೆ. ಮನುಷ್ಯರು ಭೋಗ ಮಾಡುವ ರೀತಿಯೇ ಬೇರೆ ರೀತಿಯಾಗಿದೆ. ಉದಾಹರಣೆಗೆ- ಹಾಲು ನೀರು ಬೆರೆತಾಗ ಅದನ್ನು ಬೇರ್ಪಡಿಸುವ ಶಕ್ತಿ ಮನುಷ್ಯರಿಗಾಗಲಿ ಮತ್ತೊಬ್ಬರಿಗಾಗಲಿ ಇಲ್ಲ. ಆದರೆ ಹಂಸ ಪಕ್ಷಿಗೆ ವಿಶಿಷ್ಟವಾದ ಶಕ್ತಿ . ಅದಕ್ಕೆ ಹಾಲು ನೀರನ್ನು ಬೇರ್ಪಡಿಸುವ ಶಕ್ತಿ ಇದೆ. ಹಂಸ ಹಾಲನ್ನು ಮಾತ್ರ ಸ್ವೀಕರಿಸಿ ನೀರನ್ನು ಬಿಡುತ್ತದೆ. ಅದರಂತೆ ದೇವತೆಗಳಾದ ಪಾಂಡವರಿಗೆ ತಮ್ಮ ಸ್ತ್ರೀಯನ್ನು ಅಷ್ಟೇ ಸ್ಪರ್ಶಿಸುವ ಶಕ್ತಿ ಇದೆ. ಶ್ರೀಶ್ರೀ ಸತ್ಯಾತ್ಮತೀರ್ಥ ಸ್ವಾಮಿಗಳು ಹೇಳಿದ ಉದಾಹರಣೆ. ಒಂದು ಕಡೆ ಬಂಗಾರದ, ಬೆಳ್ಳಿಯ ಕಬ್ಬಿಣದ ಪುಡಿಗಳನ್ನು ಮಿಶ್ರಣ ಮಾಡಿ ಇಟ್ಟು, ಅದರ ಮೇಲೆ ಅಯಸ್ಕಾಂತವನ್ನು ತೆಗೆದು ಕೊಂಡು ಹೋದಾಗ ಅದು ಕಬ್ಬಿಣದ ಪುಡಿಯನ್ನು ಮಾತ್ರ ಆಕರ್ಷಿಸುತ್ತದೆ.

ಉಳಿದವುಗಳನ್ನು ಬಿಡುತ್ತದೆ. ಜಡವಾದ ಪದಾರ್ಥಗಳಿಗೆ ಹೀಗೆ ಶಕ್ತಿ ಇರುವಾಗ ಅದರ ಅಭಿಮಾನಿಗಳಾದ ದೇವತೆಗಳಿಗೆ ವಿಶಿಷ್ಟವಾದ ಶಕ್ತಿ ಇದೆ ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ. 'ಅಚಿಂತ್ಯಾಃ ಶಕ್ತಯಃ ತಾಸಾಂ' ಎಂದು ಭಾಷ್ಯದಲ್ಲಿ ಹೇಳಿದಂತೆ ದೇವತೆಗಳಿಗೆ ಪರಮಾತ್ಮನ ಅನುಗ್ರಹದಿಂದ ಅಚಿಂತ್ಯವಾದ ಶಕ್ತಿ ಯಥಾಯೋಗ್ಯವಾಗಿ ಇರುತ್ತದೆ. ಆದ್ದರಿಂದ ದೇವತೆಗಳಿಗೆ ಒಂದೇ ದೇಹದಲ್ಲಿ ಬೇರೆ ಬೇರೆ ದೇವಿಯರು ಇದ್ದರೂ ತಮ್ಮ ಪತ್ನಿಯನ್ನು ಮಾತ್ರ ಸ್ಪರ್ಶ ಮಾಡುವ ಶಕ್ತಿ ಇರುತ್ತದೆ.

ಆದ್ದರಿಂದ ದ್ರೌಪದಿ ಜನ್ಮದಲ್ಲಿ ಧರ್ಮರಾಜಾದಿಗಳಿಗೆ ಪರಪತ್ನಿಯರ ಸಹವಾಸವಾಗಿಲ್ಲ. ದ್ರೌಪದಿ ದೇಹದ ದೇವಿಯರಿಗೂ ಪರಪುರುಷಸ್ಪರ್ಶವಾಗಿಲ್ಲ. ಧರ್ಮರಾಜಾದಿಗಳು ಮತ್ತು ಭಾರತ್ಯಾದಿದೇವಿಯರೂ ಅತ್ಯಂತ ಪರಿಶುದ್ಧರಾಗಿದ್ದರೂ.

**ಭೂಗೋಳ ಖಗೋಳದ ನಿರ್ಣಯ**

ಶ್ರೀಮದಾಚಾರ್ಯರು ತಮ್ಮ ಶಾಸ್ತ್ರ ಗ್ರಂಥಗಳಲ್ಲಿ ಕೋಟಿ ಕೋಟಿ ವಿಷಯಗಳ ಬಗ್ಗೆ ನಿರ್ಣಯವನ್ನು ಮಾಡಿದ್ದಾರೆ. ಅವುಗಳ ಜ್ಞಾನ ಮೋಕ್ಷಸಾಧನ. ಅವೆಲ್ಲವನ್ನು ನಾವು ತಿಳಿಯಲೇ ಬೇಕಾದದ್ದು ಅತ್ಯಾವಶ್ಯಕವಾಗಿದೆ. ಅಂಥಹ ತಿಳಿಯಲೇ ಬೇಕಾದ ವಿಷಯದಲ್ಲಿ ಭೂಗೋಳ ಹಾಗ ಖಗೋಳಗಳ ವಿಷಯವೂ ಒಂದು. ಇದರ ಬಗ್ಗೆ ಅನೇಕ ಪುರಾಣಗಳು ಬೆಳಕು ಚೆಲ್ಲಿವೆ. ಬೃಹದಾರಣ್ಯಕ ಉಪನಿಷತ್, ವರಾಹ ಪುರಾಣ, ವಿಷ್ಣು ಪುರಾಣ, ಬ್ರಹ್ಮಾಂಡ ಪುರಾಣ, ಭಾಗವತ ಪುರಾಣ ಅಲ್ಲದೇ ಇನ್ನನೇಕ ಪುರಾಣಗಳು, ಪಂಚರಾತ್ರದಲ್ಲಿ ಕೆಲವು ಸಂಹಿತಾಗಳು, ಮಹಾಭಾರತದ ಭೀಷ್ಮಪರ್ವ ಮುಂತಾದವುಗಳಲ್ಲಿ ನೋಡಬಹುದು. ಅಲ್ಲದೆ ವಾಲ್ಮೀಕಿ ರಾಮಾಯಣದಲ್ಲಿ ಸುಗ್ರೀವ ಸೀತೆಯನ್ನು ಹುಡುಕಲು ಹೊರಟ ವಾನರರಿಗೆ ನಾಲ್ಕು ದಿಕ್ಕುಗಳಲ್ಲಿ ಇರುವ ದೇಶವಿಶೇಷಗಳನ್ನು ಹೇಳುತ್ತಾನೆ. ಅಲ್ಲಿ ಎಲ್ಲಿಯವರೆಗೆ ವಾನರರು ಹೋಗಬಹುದೋ ಅಲ್ಲಿಯ ತನಕದ ದೇಶದ ವಿವರಣೆಯನ್ನು ನೀಡಿದ್ದು ನೋಡುತ್ತೇವೆ. ಆದರೆ ನಾನಾ ಗ್ರಂಥಗಳಲ್ಲಿ ಬೇರೆ ಬೇರೆ ರೀತಿಯಾಗಿ ಭೂಗೋಳ ಖಗೋಳದ ನಿರೂಪಣೆ ಇದೆ. ಅಲ್ಲದೆ ಆಧುನಿಕ ವೈಜ್ಞಾನಿಕ ರೀತಿಯಿಂದ ನಾವು ಯೋಚಿಸಿದರೆ ನಮ್ಮ ಪುರಾಣದ ವಿವರಣೆ ಯಾವುದಕ್ಕೂ ಹೊಂದಲು ಕಷ್ಟವಿದೆ. ಆದ್ದರಿಂದ ಪರಂಪರಯಾ ಮೋಕ್ಷೋಪಯೋಗಿಯಾದ ಭೂಗೋಳದ ನಿರ್ಣಯವನ್ನು ಶ್ರೀಮದಾಚಾರ್ಯರು ಇಲ್ಲಿ ಮಾಡುತ್ತಾರೆ. ಅಲ್ಲದೆ ಯಾವ ಗ್ರಂಥದಲ್ಲಿ ಹೇಳಿದ ಭೂಗೋಳದ ಹಾಗು ಖಗೋಳದ ವಿಚಾರವನ್ನು ಅಂಗೀಕಾರ ಮಾಡಬೇಕು ಎನ್ನುವುದನ್ನು ತಾವು ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಹೇಳಿದ್ದಾರೆ. ಪಂಚಮ ಸ್ಕಂಧದ ೧೬ ಅಧ್ಯಾಯದಲ್ಲಿ ಹೀಗೆ ಹೇಳುತ್ತಾರೆ.

> ಯಥಾ ಭಾಗವತೇ ತೂಕ್ತಂ ಭೌವನಂ ಕೋಶಲಕ್ಷಣಂ।
> ತಸ್ಯಾವಿರೋಧತೋ ಯೋಜ್ಯಂ ಸರ್ವಂ ಗ್ರಂಥಾಂತರಸ್ಥಿತಮ್ ॥
>
> ಮಂಡೋದೇ ಪೂರಣಂ ಚೈವ ವ್ಯತ್ಯಾಸಂ ಕ್ಷೀರಸಾಗರೇ।
> ರಾಹುಸೋಮರವೀಣಾಂ ಚ ಮಂಡಾಲಾದ್ ದ್ವಿಗುಣೋಕ್ತಿತಾಮ್ ॥
> ಏನ್ನೈವ ಸರ್ವಮುನ್ನೇಯಂ ಯೋಜನಾಭೇದತೋಽತ್ರ ತು ॥ ಇತಿ ಬ್ರಹ್ಮಾಂಡೇ।

ಬ್ರಹ್ಮಾಂಡ ಹಾಗು ಅದರ ಒಳಗಡೆ ಇರುವ ಭೂಲೋಕಾದಿಗಳ ಪರಿಮಾಣವನ್ನು ಭಾಗವತದಲ್ಲಿ ಹೇಳಿದಂತೆ ತಿಳಿಯಬೇಕು. ಭಾಗವತಕ್ಕೆ ವಿರೋಧ ಬರದಂತೆ ಇತರ ಪುರಾಣಾದಿಗಳನ್ನು ಹಾಗು ಗ್ರಂಥಾಂತರದಲ್ಲಿ ಇದ್ದದ್ದನ್ನು ಹೊಂದಿಸಬೇಕು. ಅದರಂತೆ ಭಾಗವತದಲ್ಲಿ ಕೆಲವು ವ್ಯತ್ಯಾಸವಿದೆ. ಅದನ್ನು ಸರಿಯಾಗಿ ತಿಳಿಯಬೇಕು. ಅದು ಯಾವುದೆಂದರೆ

೧. ಸಮುದ್ರಗಳನ್ನು ಹೇಳುವಾಗ ಭಾಗವತದಲ್ಲಿ ಕ್ಷೀರಸಮುದ್ರವನ್ನು ಹೇಳಿ ನಂತರ ದಧಿ ಸಮುದ್ರವನ್ನು ಹೇಳಿದ್ದಾರೆ. ಮತ್ತು ಅವುಗಳ ಪರಿಮಾಣದ ವಿಷಯದಲ್ಲೂ ವ್ಯತ್ಯಾಸ ಮಾಡಿದ್ದಾರೆ. ಅದನ್ನು ಸರಿಯಾಗಿ ತಿಳಿಯಬೇಕು. ಅಂದರೆ ಕ್ರೌಂಚಕ್ಕೆ ದಧಿ ಸಮುದ್ರ ಆವರಣವಾಗಿದೆ. ಶಾಕ ದ್ವೀಪಕ್ಕೆ ಕ್ಷೀರ ಸಮುದ್ರ ಆವರಣವಾಗಿದೆ ಎಂದು ತಿಳಿಯಬೇಕು. ಅದರಂತೆ ದಧಿ ಸಮುದ್ರ ೧೬ ಲಕ್ಷ ಯೋಜನ ಮತ್ತು ಕ್ಷೀರ ಸಮುದ್ರ೩೨ ಲಕ್ಷ ಯೋಜನ ಎಂದು ತಿಳಿಯಬೇಕು.

೨. ರಾಹು, ಚಂದ್ರ ಮತ್ತು ಸೂರ್ಯ ಮಂಡಲಗಳ ಪರಿಮಿತಿ ಭಾಗವತದಲ್ಲಿ ಹೇಳಿದಂತೆ ತಿಳಿಯಬಾರದು. ಸೂರ್ಯ ಮಂಡಲಕ್ಕಿಂತ ಚಂದ್ರ ಮಂಡಲ ಎರಡು ಪಟ್ಟು ಮತ್ತು ರಾಹು ಮಂಡಲ ಚಂದ್ರಕ್ಕಿಂತ ಎರಡು ಪಟ್ಟು ಎಂದು ತಿಳಿಯಬೇಕು. ಭಾಗವತದ ಪ್ರಕಾರ ಸೂರ್ಯ ಮಂಡಲದ ವಿಸ್ತಾರ ಹತ್ತು ಸಾವಿರ ಯೋಜನ. ಭಾಗವತದಲ್ಲಿ ಚಂದ್ರ ಮಂಡಲ ದ್ವಾದಶಸಹಸ್ರ ಎಂದಿದ್ದಾರೆ. ಇಲ್ಲಿ ದ್ವಾದಶ ಸಹಸ್ರ ಎಂದರೆ ಇಪ್ಪತ್ತು ಸಾವಿರ ಎಂದು ಅರ್ಥ ಮಾಡಬೇಕು. ಹಾಗಾಗಿ ಚಂದ್ರ ಮಂಡಲ ಇಪ್ಪತ್ತು ಸಾವಿರ ಯೋಜನ. ಭಾಗವತದಲ್ಲಿ ರಾಹು ಮಂಡಲ ತ್ರಯೋದಶ ಸಹಸ್ರ ಎಂದಿದ್ದಾರೆ. ತ್ರಯೋದಶ ಎನ್ನುವದಕ್ಕೆ ನಲವತ್ತು ಎಂದು ಅರ್ಥವನ್ನು ಮಾಡಬೇಕು. ಹಾಗಾಗಿ ರಾಹು ಮಂಡಲ ನಲವತ್ತು ಸಾವಿರ ಯೋಜನ ಎಂದು ಅರ್ಥ ಮಾಡಬೇಕು.

ಹೀಗೆ ಅನೇಕ ಗೊಂದಲಗಳ ಆಗರ ಭೂಗೋಳ ಖಗೋಳಗಳ ನಿರ್ಣಯವನ್ನು ಮತ್ತು ಬ್ರಹ್ಮಾಂಡದ ಆವರಣಗಳ ಬಗ್ಗೆ ವಿವರವನ್ನು ಶ್ರೀಮದಾಚಾರ್ಯರು ನಮಗೆ ಅನುಗ್ರಹಿಸಿ ಪರಮೋಪಕಾರ ಮಾಡಿದ್ದಾರೆ. ಅವುಗಳ ವಿವರಣೆಯನ್ನು ಮಹಾನುಭಾವರಾದ ಟಿಪ್ಪಣಿಕಾರರು ಅನೇಕ ಪ್ರಮಾಣಗಳಿಂದ ಸಹಿತವಾಗಿ ನಮಗೆ ನಿರೂಪಣೆಯನ್ನು ಮಾಡಿದ್ದಾರೆ. ಅವುಗಳನ್ನು ಸ್ವಲ್ಪ ವಿಚಾರ ಮಾಡೋಣ.

ಭೂಗೋಳದ ವಿಸ್ತಾರ ವಿವರ ಜನಾರ್ದನ ಭಟ್ಟರ ಟಿಪ್ಪಣಿಗೆ ಅನುಸಾರವಾಗಿ ವಿವರಿಸಲಾಗಿದೆ

| | | | |
|---|---|---|---|
| ಜಂಬು ದ್ವೀಪ | 50,000 ಯೋಜನ | ಲವಣ ಸಮುದ್ರ | 1,00,000 ಯೋಜನ |
| ಪ್ಲಕ್ಷ ದ್ವೀಪ | 2,00,000 ಯೋಜನ | ಇಕ್ಷುರಸ ಸಮುದ್ರ | 2,00,000 ಯೋಜನ |
| ಶಾಲ್ಮಲೀ ದ್ವೀಪ | 4,00,000 ಯೋಜನ | ಸುರಾ ಸಮುದ್ರ | 4,00,000 ಯೋಜನ |
| ಕುಶ ದ್ವೀಪ | 8,00,000 ಯೋಜನ | ಘೃತ ಸಮುದ್ರ | 8,00,000 ಯೋಜನ |
| ಕ್ರೌಂಚ ದ್ವೀಪ | 16,00,000 ಯೋಜನ | ದಧಿ ಸಮುದ್ರ | 16,00,000 ಯೋಜನ |
| ಶಾಕ ದ್ವೀಪ | 32,00,000 ಯೋಜನ | ಕ್ಷೀರ ಸಮುದ್ರ | 32,00,000 ಯೋಜನ |
| ಪುಷ್ಕರ ದ್ವೀಪ | 64,00,000 ಯೋಜನ | ಶುದ್ಧೋದಕ ಸಮುದ್ರ | 64,00,000 ಯೋಜನ |
| **ಒಟ್ಟು** | **1,26,50,000 ಯೋಜನ** | **ಒಟ್ಟು** | **1,27,00,000 ಯೋಜನ** |

| | |
|---|---|
| ವಜ್ರ- ಸುವರ್ಣ ಭೂಮಿ | 96,00,000 ಯೋಜನ |
| ಲೋಕಾಲೋಕ ಪ್ರದೇಶ | 50,50,000 ಯೋಜನ |
| ಅಂಧಃತಮ | 6,99,00,000 ಯೋಜನ |
| ಘನೋದಕ | 13,98,00,000 ಯೋಜನ |
| ಅನಂತಾಸನ | 3,00,000 ಯೋಜನ |
| **ಒಟ್ಟು** | **22,46,50,000 ಯೋಜನ** |

| | |
|---|---|
| ದ್ವೀಪಗಳು | 1,26,50,000 ಯೋಜನ |
| ಸಮುದ್ರಗಳು | 1,27,00,000 ಯೋಜನ |
| ಇತರೆ | 22,46,50,000 ಯೋಜನ |
| **ಒಟ್ಟು** | **25,00,00,000 ಯೋಜನ** |

ಬ್ರಹ್ಮಾಂಡದ ಆವರಣದ ವಿಷಯದಲ್ಲಿ ಶ್ರೀವಾದಿರಾಜರು ತಮ್ಮ ಅಭಿಪ್ರಾಯವನ್ನು ಮ.ಭಾ.ತಾ.ನಿ. ೧೨ನೇ ಅಧ್ಯಾಯ ೧೧೪ನೇ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ ಹೇಳಿದ್ದಾರೆ. ಅದನ್ನು ಹಾಕಲಾಗಿದೆ.

| **ಆವರಣಗಳು** | **ಶ್ರೀವಾದಿರಾಜರ ಪ್ರಕಾರ** | **ಯಾದವಾರ್ಯರ ಪ್ರಕಾರ** |
|---|---|---|
| ಪೃಥಿವೀ | 100 ಕೋಟಿ ಯೋಜನ | 100 ಕೋಟಿ ಯೋಜನ |
| ಜಲ | 1000 ಕೋಟಿ ಯೋಜನ | 1000 ಕೋಟಿ ಯೋಜನ |
| ಅಗ್ನಿ | (ಶತ ಕೋಟಿ ಯೋ. ಸಹಿತ) 10 ಸಹಸ್ರ ಕೋಟಿ ಯೋಜನ | ದಶ ಸಹಸ್ರ ಕೋಟಿ ಯೋಜನ |
| ವಾಯು | (ಶತ ಕೋಟಿ ಯೋ. ಸಹಿತ) 20 ಸಹಸ್ರ ಕೋಟಿ ಯೋಜನ | ಲಕ್ಷ ಕೋಟಿ ಯೋಜನ |
| ಆಕಾಶ | (ಶತ ಕೋಟಿ ಯೋ. ಸಹಿತ) 30 ಸಹಸ್ರ ಕೋಟಿ ಯೋಜನ | ದಶ ಲಕ್ಷ ಕೋಟಿ ಯೋಜನ |
| ಅಹಂಕಾರ | (ಶತ ಕೋಟಿ ಯೋ. ಸಹಿತ) 40 ಸಹಸ್ರ ಕೋಟಿ ಯೋಜನ | ಕೋಟಿ ಕೋಟಿ ಯೋಜನ |
| ಮಹತ್ ತತ್ವ | (ಶತ ಕೋಟಿ ಯೋ. ಸಹಿತ) 50 ಸಹಸ್ರ ಕೋಟಿ ಯೋಜನ | ದಶ ಕೋಟಿ ಕೋಟಿ ಯೋಜನ |
| ಗುಣ ತ್ರಯ | (ಶತ ಕೋಟಿ ಯೋ. ಸಹಿತ) 60 ಸಹಸ್ರ ಕೋಟಿ ಯೋಜನ | ಶತ ಕೋಟಿ ಕೋಟಿ ಯೋಜನ |

(ತಮೋಗುಣ ಶತ ಕೋಟಿ ಕೋಟಿ ಯೋಜನ
ರಜೋ ಗುಣ ದಶ ಶತ ಕೋಟಿ ಕೋಟಿ ಯೋಜನ
ಸತ್ವ ಗುಣ ಶತ ಶತ ಕೋಟಿ ಕೋಟಿ ಯೋಜನ)

**ಶ್ರೀಮಧುಸೂದನ ಭಿಕ್ಷುಗಳು ಹೇಳಿದ ಜಂಬೂದ್ವೀಪದ ವಿಸ್ತಾರ**

| | **ವಿಸ್ತಾರ (ಅಗಲ)** | **ಆಯತ (ಉದ್ದ)** |
|---|---|---|
| ಜಂಬೂದ್ವೀಪ | 1,00,000 ಯೋಜನ | |
| ಮೇರು ಪರ್ವತ | 16,000 ಯೋಜನ | |
| ಇಲಾವೃತ ಖಂಡ | 9000 ಯೋಜನ | 9000 ಯೋಜನ |
| ನಿಷಧ ಪರ್ವತ | 2000 ಯೋಜನ | 100000 ಯೋಜನ |
| ಹರಿವರ್ಷ ಖಂಡ | 9000 ಯೋಜನ | 100000 ಯೋಜನ |
| ಹೇಮಕೂಟ ಪರ್ವತ | 2000 ಯೋಜನ | 90,000 ಯೋಜನ |

| | | |
|---|---|---|
| ಕಿಂಪುರುಷ | 9000 ಯೋಜನ | 90,000 ಯೋಜನ |
| ಹಿಮವತ್ಪರ್ವತ | 2000 ಯೋಜನ | 80,000 ಯೋಜನ |
| ಭರತ ಖಂಡ | 9000 ಯೋಜನ | 80,000 ಯೋಜನ |
| ರಮಣಕ ವರ್ಷ | 9000 ಯೋಜನ | 1,00,000 ಯೋಜನ |
| ನೀಲ ಪರ್ವತ | 9000 ಯೋಜನ | 1,00,000 ಯೋಜನ |
| ಹಿರಣ್ಮಯ ವರ್ಷ | 9000 ಯೋಜನ | 90,000 ಯೋಜನ |
| ಶ್ವೇತ ಪರ್ವತ | 2000 ಯೋಜನ | 90,000 ಯೋಜನ |
| ಉತ್ತರ ಕುರು ವರ್ಷ | 9000 ಯೋಜನ | 80,000 ಯೋಜನ |
| ಶೃಂಗ ಪರ್ವತ | 2000 ಯೋಜನ | 80,000 ಯೋಜನ |
| ಗಂಧಮಾದನ | 2000 ಯೋಜನ | 34,000 ಯೋಜನ |
| ಭದ್ರಾಶ್ವ (ಪೂರ್ವ) | 31,000 ಯೋಜನ | |
| ಮಾಲ್ಯವತ್ ಪರ್ವತ | 2000 ಯೋಜನ | 34,000 ಯೋಜನ |
| ಕೇತುಮಾಲಾ (ಪಶ್ಚಿಮ) | 31,000 ಯೋಜನ | |

| | |
|---|---|
| ಮೇರುವಿನ ದಕ್ಷಿಣಭಾಗ ಆರಂಭಿಸಿ ಲವಣ ಸಮುದ್ರ ಪರ್ಯಂತ 4 ಖಂಡಗಳು | 36,000 ಯೋಜನ |
| ಮೂರು ಮರ್ಯಾದಾ ಗಿರಿಗಳು | 6,000 ಯೋಜನ |
| ಮೇರು ಪರ್ವತದ ಮಧ್ಯಭಾಗದಿಂದ ಒಂದು ಭಾಗದ ಪರ್ವತದ ತುದಿ | 8000ಯೋಜನ |
| ಜಂಬೂ ದ್ವೀಪದ ದಕ್ಷಿಣ ಭಾಗ ಒಟ್ಟು ಎಲ್ಲ ಸೇರಿ | 50,000 ಯೋಜನ |

ಇದೇ ರೀತಿಯಾಗಿ ಮೇರುವಿನ ಉತ್ತರ ಭಾಗದಲ್ಲೂ ಲೆಕ್ಕವನ್ನು ಮಾಡಿ ತಿಳಿಯಬೇಕು. ಆಗಲೂ 50,000 ಯೋಜನವಾಗುತ್ತದೆ.

| | |
|---|---|
| ಮೇರುವಿನ ಪೂರ್ವ ಭಾಗದಲ್ಲಿ ಮೇರು ಪರ್ವತದ ಮಧ್ಯಭಾಗದಿಂದ ತುದಿಯ ವರೆಗೆ | 8,000 ಯೋಜನ |
| ಇಲಾವೃತ ಖಂಡ | 9,000 ಯೋಜನ |
| ಗಂಧಮಾದನ ಪರ್ವತ | 2,000 ಯೋಜನ |
| ಭದ್ರಾಶ್ವ ಖಂಡ | 31,000 ಯೋಜನ |
| ಜಂಬೂ ದ್ವೀಪದ ಪೂರ್ವ ಭಾಗ ಒಟ್ಟು ಎಲ್ಲ ಸೇರಿ | 50,000 ಯೋಜನ |

ಇದೇ ರೀತಿಯಾಗಿ ಮೇರುವಿನ ಪಶ್ಚಿಮ ಭಾಗದಲ್ಲೂ ಲೆಕ್ಕವನ್ನು ಮಾಡಿ ತಿಳಿಯಬೇಕು. ಆಗಲೂ 50,000 ಯೋಜನವಾಗುತ್ತದೆ.

ಊರ್ಧ್ವಲೋಕಗಳ ಅಂತರ ಮತ್ತು ಭೂಕಂದದ ವಿವರ ಶ್ರೀಮಧುಸೂದನಭಿಕ್ಷುಗಳ ಟಿಪ್ಪಣಿಗೆ ಅನುಗುಣವಾಗಿ ಹೀಗಿದೆ.

| | **ಮೇರುವಿನಿಂದ ಎತ್ತರ** | **ಭೂಕಂದ** |
|---|---|---|
| ಭುವರ್ಲೋಕ | 1,00,000 ಯೋಜನ | |
| ಸ್ವರ್ಗಲೋಕ | 50,00,000 ಯೋಜನ | 50,000 ಯೋಜನ |
| ಮಹರ್ಲೋಕ | 75,00,000 ಯೋಜನ | 1,25,00,000 ಯೋಜನ |

| | | |
|---|---|---|
| ಜನೋಲೋಕ | 1,12,50,000 ಯೋಜನ | 1,50,00,000 ಯೋಜನ |
| ತಪೋಲೋಕ | 1,68,75,000 ಯೋಜನ | 1,50,00,000 ಯೋಜನ |
| ಸತ್ಯಲೋಕ | 4,06,25,000 ಯೋಜನ | 1,50,00,000 ಯೋಜನ |
| ವೈಕುಂಠಲೋಕ | 8,12,50,000 ಯೋಜನ | 2,99,50,000 ಯೋಜನ |
| **ಒಟ್ಟು** | **16,25,00,000 ಯೋಜನ** | **8,75,00,000 ಯೋಜನ** |

| | |
|---|---|
| ಲೋಕಗಳು | 16,25,00,000 ಯೋಜನ |
| ಭೂಕಂದ | 8,75,00,000 ಯೋಜನ |
| ಒಟ್ಟು | 25,00,00,000 ಯೋಜನ |

ಶ್ರೀಮದಾಚಾರ್ಯರ ವಾಕ್ಯಕ್ಕೆ ಅನೇಕ ರೀತಿಯಿಂದ ಅರ್ಥವನ್ನು ಹೇಳಿ ತಾಮ್ರಪರ್ಣಿ ಆಚಾರ್ಯರು ಭುವರ್ಲೋಕ ಮುಂತಾದವುಗಳ ಅಂತರ ವಿವರವನ್ನು ನಾಲ್ಕು ರೀತಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಅವುಗಳ ವಿವರ ಹೀಗಿದೆ.

ತಾಮ್ರಪರ್ಣೀಯ

| | ಪ್ರಕಾರ 1 | ಪ್ರಕಾರ 2 | ಪ್ರಕಾರ 3 | ಪ್ರಕಾರ 4 |
|---|---|---|---|---|
| ಭುವಃ | 1,00,000 ಯೋ | 1,00,000 ಯೋ | 1,00,000 ಯೋ | 1,00,000 ಯೋ |
| ಸ್ವರ್ಗ | 50,00,000 ಯೋ | 50,00,000 ಯೋ | 50,00,000 ಯೋ | 50,00,000 ಯೋ |
| ಮಹಃ | 1,50,00,000ಯೋ | 1,50,00,000ಯೋ | 1,50,00,000ಯೋ | 75,00,000 ಯೋ |
| ಜನಃ | 2,00,00,000ಯೋ | 2,00,00,000ಯೋ | 2,00,00,000ಯೋ | 1,12,50,000 ಯೋ |
| ತಪಃ | 2,50,00,000ಯೋ | 2,50,00,000ಯೋ | 2,50,00,000ಯೋ | 1,68,75,000 ಯೋ |
| ಸತ್ಯ | 6,00,00,000ಯೋ | 6,50,00,000ಯೋ | 6,00,00,000ಯೋ | 4,06,25,000 ಯೋ |
| ವೈಕುಂಠ | 12,00,00,000ಯೋ | 12,00,00,000ಯೋ | 12,50,00,000ಯೋ | 8,12,50,000 ಯೋ |

ಇದರಲ್ಲಿ ಪ್ರಕಾರ ೧ ರಲ್ಲಿ ಹೇಳಿದಂತೆ ಸ್ವರ್ಗಾದಿಗಳ ಪರಿಮಾಣವನ್ನು ಭಾವಚಂದ್ರಿಕಾದಲ್ಲಿ ಹೇಳಿದ್ದಾರೆ. ಅದರಲ್ಲಿ ಶ್ರೀರಾಘವೇಂದ್ರಮಠದ ವಾದೀಂದ್ರತೀರ್ಥರ ಅಭಿಪ್ರಾಯವೂ ಇದೇ ಆಗಿದೆ ಎಂದು ಹೇಳಿದ್ದಾರೆ.

ಪ್ರಕಾರ ೨ ರಲ್ಲಿ ನಿರೂಪಿದವಾದದ್ದು ತಮಗೆ ಅಭಿಪ್ರೇತವಾದದ್ದು ಎಂದು ತಾಮ್ರಪರ್ಣೀ ಆಚಾರ್ಯರು ಹೇಳಿದ್ದಾರೆ.

ಪ್ರಕಾರ ೪ ರಲ್ಲಿ ಮಧುಸೂದನ ಭಿಕ್ಷುಗಳು ಹೇಳಿದಂತೆ ಹೇಳಿದ್ದಾರೆ.

ಶ್ರೀ ಮಧುಸೂದನ ಭಿಕ್ಷುಗಳ ಪ್ರಕಾರ ಅಧೋ ಲೋಕಗಳ ಅಂತರ

| | | | |
|---|---|---|---|
| ಅತಲ | 12000 ಯೋಜನ | ರಸಾತಲ | 12000 ಯೋಜನ |
| ವಿತಲ | 12000 ಯೋಜನ | ಪಾತಾಲ | 12000 ಯೋಜನ |
| ಸುತಲ | 12000 ಯೋಜನ | ನರಕಗಳು | 12000 ಯೋಮತ್ತು 4000 ಯೋ |
| ಮಹಾತಲ | 12000 ಯೋಜನ | ಗರ್ಭೋದಕ | 24,99,00,000 ಯೋಜನ |
| ತಲಾತಲ | 12000 ಯೋಜನ | ಒಟ್ಟು | 25,00,00,000 ಯೋಜನ |

**ಧರ್ಮರಾಜ - ದೇವಕಿ ಮದುವೆ ಶಾಸ್ತ್ರಸಮ್ಮತವೆ ?**

ಪಂಚ ಪಾಂಡವರು ದ್ರೌಪದಿಯನ್ನು ಮದುವೆಯಾದರು. ಅನಂತರ ಪ್ರತಿಯೊಬ್ಬರು ಬೇರೆ ಬೇರೆ ಮದುವೆ ಆದರು. ಅವರಲ್ಲಿ ಧರ್ಮರಾಜ ಶಿಶುಪಾಲನ ಮಗಳಾದ ದೇವಕಿಯನ್ನು ಮದುವೆ ಆದನು. ಇದು ಶಾಸ್ತ್ರ ಸಮ್ಮತವೇ ಎಂದು ಜಿಜ್ಞಾಸಾ.

> ಅನನ್ಯಪೂರ್ವಿಕಾಂ ಕಾಂತಾಮಸಪಿಂಡಾಂ ಯವೀಯಸೀಮ್ ।
> ಅರೋಗಿಣೀಂ ಭ್ರಾತೃಮತೀಮಸಮಾನಾರ್ಷಗೋತ್ರಜಾಮ್ ॥

ಎಂದು ಧರ್ಮಶಾಸ್ತ್ರದಲ್ಲಿ ಯಾಜ್ಞವಲ್ಕ್ಯ ವಚನಇದೆ. ಇದರಲ್ಲಿ ಯಾವ ಕನ್ಯೆಯನ್ನು ವಿವಾಹವಾಗಬಾರದು ಎಂದು ಹೇಳುತ್ತಾರೆ. ಅನ್ಯಪೂರ್ವಿಕಾ ಆಗಿರಬಾರದು. (ಇನ್ನೊಬ್ಬ ವರನ ಜೊತೆ ಸಪ್ತಪದಿಯನ್ನು ಮುಗಿಸಿದವಳು ಆಗಿರಬಾರದು) ನೋಡಲು ಅಸಹ್ಯ ಇರಬಾರದು, ಅಸಪಿಂಡ ಆಗಿರಬೇಕು, ಗಂಡನಿಗಿಂತ ಸಣ್ಣ ವಯಸ್ಸಿನವಳಾಗಿರಬೇಕು, ರೋಗರಹಿತಳು, ಅಣ್ಣ- ತಮ್ಮಂದಿರನ್ನು ಉಳ್ಳವಳು, ತನ್ನ ಗೋತ್ರದಿಂದ ಭಿನ್ನ ಗೋತ್ರದವಳು ಆಗಿರಬೇಕು ಎಂದು ಹೇಳಿದ್ದಾರೆ.

ಸಪಿಂಡ ಕನ್ಯೆಯನ್ನು ಮದುವೆ ಆಗಬಾರದು ಎಂದಿದ್ದಾರೆ. ಸಪಿಂಡ ಎಂದರೆ 'ಸಮಾನಃ ಏಕಃ ಪಿಂಡಃ ಪಿಂಡದಾನಕ್ರಿಯಾ ಮೂಲಪುರುಷಶರೀರಂ ವಾ ಯಸ್ಯಾಃ ಸಾ ಸಪಿಂಡಾ' ಎಂದು ಧರ್ಮಶಾಸ್ತ್ರದಲ್ಲಿ ಇದೆ. ಯಾವ ಗಂಡು - ಹೆಣ್ಣುಗಳಿಗೆ ಪಿಂಡದಾನ ಎಂಬ ಪ್ರಕ್ರಿಯಾ ಒಂದೇ ಇದೆಯೋ ಅವರು ಸಪಿಂಡರು. ಅಥವಾ ಯಾವ ಗಂಡು- ಹೆಣ್ಣುಗಳಿಗೆ ಮೂಲ ಪುರುಷ ಒಬ್ಬನೇ ಇದ್ದಾನೋ ಅವರಿಬ್ಬರು ಸಪಿಂಡರು.

ಒಬ್ಬ ವ್ಯಕ್ತಿಯ (ದೇವದತ್ತ) ಪಿತೃ ಪಿತಾಮಹ ಪ್ರಪಿತಾಮಹರು ಪಿಂಡಭಾಜರು ಎಂದು ಕರೆಸಿಕೊಳ್ಳುತ್ತಾರೆ. ಪ್ರಪಿತಾಮಹನ ಪಿತೃ ಪಿತಾಮಹ ಪ್ರಪಿತಾಮಹರು ಲೇಪಭಾಜನರು ಎಂದು ಕರೆಸಿಕೊಳ್ಳುತ್ತಾರೆ. ಆ ವ್ಯಕ್ತಿ (ದೇವದತ್ತ) ಪಿಂಡದ ಎಂದು ಕರೆಸಿಕೊಳ್ಳುತ್ತಾನೆ. ಮೇಲಿನವರನ್ನು ಸೇರಿಸಿದಾಗ ಅವನು ಏಳನೇಯವನು. ಏಳು ಜನರ ವರೆಗೆ ಸಾಪಿಂಡ್ಯ. ಎಂಟರಿಂದ ಹದಿನಾಲ್ಕನೇ ತಲೆ ಮಾರಿನ ವರೆಗೆ ಸೋದಕರು. ಹದಿನಾಲ್ಕರಿಂದ ಇಪ್ಪತ್ತೊಂದರ ವರೆಗೆ ಸಗೋತ್ರರು ಎಂದು ಕರೆಸಿಕೊಳ್ಳುತ್ತಾರೆ.

ಇಲ್ಲಿ ಸಾಪಿಂಡ್ಯ ಎರಡು ವಿಧ. ಪಿತೃದ್ವಾರಾ ಸಾಪಿಂಡ್ಯ ಮತ್ತು ಮಾತೃದ್ವಾರಾ ಸಾಪಿಂಡ್ಯ ಎಂದು. ಪಿತೃದ್ವಾರ ಸಾಪಿಂಡ್ಯ ಏಳನೇ ಪುರುಷನ ನಂತರ ಮುಗಿಯುತ್ತದೆ. ಮಾತೃದ್ವಾರಾ ಸಾಪಿಂಡ್ಯ ಐದನೇ ಪುರುಷನ ನಂತರ ಮುಗಿಯುತ್ತದೆ.

ಪ್ರಸ್ತುತ ಧರ್ಮರಾಜನಿಗೆ ಮಾತೃದ್ವಾರಾ ಸಾಪಿಂಡ್ಯ ನಿವೃತ್ತಿ ಆಗಿಲ್ಲ. ಏಕೆಂದರೆ ಅವನು ಮೂಲ ಪುರುಷನಿಂದ ಮೂರನೇಯವನು. ಶಿಶುಪಾಲನ ಮಗಳು ನಾಲ್ಕನೇಯವಳಾಗುತ್ತಾಳೆ. ಅದು ಹೇಗೆಂದರೆ-

ಶೂರನ ಮಕ್ಕಳು ಶ್ರುತಶ್ರವಾ ಹಾಗು ಕುಂತಿ. ಅವರಲ್ಲಿ ಕುಂತಿಯ ಮಗ ಧರ್ಮರಾಜ. ಶ್ರುತಶ್ರವಾಳ ಮಗ ಶಿಶುಪಾಲ. ಅವನ ಮಗಳು ದೇವಕಿ. ಧರ್ಮರಾಜ ದೇವಕಿಯನ್ನು ಮದುವೆ ಆಗಿದ್ದಾನೆ. ಇದರಿಂದ ಧರ್ಮರಾಜ ತನ್ನ ಅಣ್ಣ ಅಥವಾ ತಮ್ಮನ ಮಗಳನ್ನು ಮದುವೆ ಆದಂತೆ ಆಯಿತು. ಒಂದು ರೀತಿಯಿಂದ ತನಗೂ ಮಗಳೇ. ಮಗಳನ್ನೇ ಮದುವೆ ಆದಂತೆ ಆಯಿತಲ್ಲ. ಇದು ಶಾಸ್ತ್ರಸಮ್ಮತವಾ? ಎಂದು ಮತ್ತೊಂದು ಪ್ರಶ್ನೆ.

**ಸಮಾಧಾನ-** ಧರ್ಮಶಾಸ್ತ್ರದಲ್ಲಿ ಯಾರು ಯಾರನ್ನು ಮದುವೆ ಆಗಬಹುದು. ಯಾರು ಯಾರನ್ನು ಮದುವೆ ಆಗಬಾರದು ಎಂದು ಸಾಪಿಂಡ್ಯನಿರ್ಣಯ ಪ್ರಕರಣದಲ್ಲಿ ನಿರ್ಣಯ ಮಾಡಿದ್ದಾರೆ.

ಚತುರ್ಥೀಮುದ್ವಹೇತ್ ಕನ್ಯಾಂ ಚತುರ್ಥಃ ಪಂಚಮೋ ವರಃ ।
ತೃತೀಯಾಂ ವಾ ಚತುರ್ಥೀಂ ವಾ ಪಕ್ಷಯೋರುಭಯೋರಪಿ ॥

ಮೂಲ ಪುರುಷನಿಂದ ನಾಲ್ಕನೇಯವಳನ್ನು ಮೂಲಪುರುಷನಿಂದ ನಾಲ್ಕನೇಯವನಾದ ಅಥವಾ ಐದನೇಯವನಾದ ವರನು ಮದುವೆ ಆಗಬಹುದು. ಮಾತೃದ್ವಾರಾ ಸಾಪಿಂಡ್ಯ ಇದ್ದಾಗ ಹಾಗೇ ಪಿತೃದ್ವಾರಾ ಸಾಪಿಂಡ್ಯವಿದ್ದಾಗಲೂ ಮೂಲಪುರುಷನಿಂದ ಮೂರನೇಯವಳನ್ನು ಅಥವಾ ನಾಲ್ಕನೇಯವಳನ್ನೂ ಮದುವೆಯಾಗಬಹುದು.

ತೃತೀಯಾಂ ಚತುರ್ಥೀಂ ವಾ ಪಕ್ಷಯೋರುಭಯೋರಪಿ ।
ವಿವಾಹಯೇತ್ ಮನುಃ ಪ್ರಾಹ ಪಾರಾಶರ್ಯೋ ಯಮೋಽಂಗಿರಾಃ ॥

ಮೂಲ ಪುರುಷನಿಂದ ಮೂರನೇಯವಳನ್ನು, ನಾಲ್ಕನೇಯವಳನ್ನು ಮದುವೆ ಆಗಬಹುದು ಎಂದು ಮನು, ಪಾರಾಶರ್ಯ, ಯಮ ಮತ್ತು ಅಂಗಿರಸರು ಹೇಳುತ್ತಾರೆ.

ಯದ್ಯಪಿ ಐದನೇ ತಲೆಮಾರಿಗೆ ಮಾತೃದ್ವಾರಾ ಸಾಪಿಂಡ್ಯ ನಿವೃತ್ತಿ ಆಗುತ್ತದೆ. ಆದರೂ ಈ ಮೇಲಿನ ಸ್ಮೃತಿವಚನದಿಂದ ಮೂರನೇ ತಲೆಮಾರಿನ ನಾಲ್ಕನೇ ತಲೆ ಮಾರಿನ ಕನ್ಯೆಯನ್ನು ಮದುವೆ ಆಗಬಹುದು ಎಂದು ತಿಳಿಯುತ್ತದೆ. ಇದು ಅನೇಕ ನಿರವಕಾಶ ವಚನವಿರುದ್ಧವಾದದ್ದರಿಂದ ಹೇಗೆ ಹೊಂದಿಸುವುದು ಎಂದರೆ ನಿರ್ಣಯಸಿಂಧುವಿನಲ್ಲಿ ಮೇಲಿನ ಅಪವಾದ ವಾಕ್ಯದಂತೆ ಅನೇಕ ವಾಕ್ಯಗಳಿವೆ. ಅವುಗಳಲ್ಲಿ ಕೆಲವು ಪ್ರಕ್ಷಿಪ್ತ, ಇನ್ನು ಕೆಲವು ವಚನಗಳು ಬ್ರಾಹ್ಮಣರಿಗೆ ಅನ್ವಯಿಸುತ್ತದೆ. ಬ್ರಾಹ್ಮಣರು ದತ್ತಕ ಹೋದಾಗ ಮೂರನೇ ತಲೆ ಮಾರು, ನಾಲ್ಕನೇ ತಲೆ ಮಾರಿನ ಹೆಣ್ಣನ್ನು ಮದುವೆ ಆಗಬಹುದು. ಅಥವಾ ಮಲ ಸೋದರಿಯರ ಪರಂಪರೆಯಲ್ಲಿ ಬಂದ ಮೂರನೇ ನಾಲ್ಕನೇ ತಲೆ ಮಾರಿನ ಹೆಣ್ಣನ್ನು ಮದುವೆ ಆಗಬಹುದು. ಇನ್ನು ಕ್ಷತ್ರಿಯರ ವಿಷಯಕ್ಕೆ ಬಂದಾಗ ಅವರು ಸಪಿಂಡರಲ್ಲಿಯೂ ಮೂರನೇ ನಾಲ್ಕನೇ ತಲೆ ಮಾರಿನ ಹೆಣ್ಣನ್ನು ಮದುವೆ ಆಗಬಹುದು ಎಂದು ಹೇಳಿದ್ದಾರೆ.

ಇಲ್ಲಿ ನಿರ್ಣಯಸಿಂಧುವಿನಲ್ಲಿ ಹೇಳಿದಂತೆ ಅಪವಾದ ವಾಕ್ಯಗಳಿಗೆ ವ್ಯಾಖ್ಯಾನ ಮಾಡಬಹುದು. ಬೇರೆ ರೀತಿಯಾಗಿಯೂ ಮಾಡಬಹುದು. ಬ್ರಾಹ್ಮಣ ದತ್ತಕ ಹೋದಾಗ ಮೂರನೇ ತಲೆ ಮಾರಿನವನು ನಾಲ್ಕನೇ ತಲೆ ಮಾರಿನ ಹೆಣ್ಣನ್ನು ಮದುವೆ ಆಗಬಹುದು ಎಂದು ಆಗಬಹುದು. ಕ್ಷತ್ರಿಯರೂ ದತ್ತಕ ಹೋದಾಗ ಮೂರನೇ ತಲೆ ಮಾರಿನವರು ನಾಲ್ಕನೇ ತಲೆ ಮಾರಿನ ಹೆಣ್ಣನ್ನು ಮದುವೆ ಆಗಬಹುದು ಎಂದೂ ವ್ಯಾಖ್ಯಾನ ಮಾಡಬಹುದು.

ಪ್ರಸ್ತುತ ಶೂರನ ಮಗಳಾದ ಕುಂತಿದೇವಿ ಶೂರನ ಗೆಳೆಯನಾದ ಕುಂತಿಭೋಜನಿಗೆ ದತ್ತಕ ಹೋಗಿದ್ದಾಳೆ. ಆದ್ದರಿಂದ ದತ್ತಕ ಹೋದವಳ ಮಗ ಧರ್ಮರಾಜನಾದ್ದರಿಂದ ಮೂಲ ಪುರುಷನಿಂದ (ಶೂರನಿಂದ) ಮೂರನೇಯವನಾದ ಧರ್ಮರಾಜ ಮೂಲಪುರುಷನಿಂದ ನಾಲ್ಕನೆಯವಳಾದ ದೇವಕಿಯನ್ನು ಮದುವೆ ಆಗಬಹುದು ಎಂದು ಹೇಳಬಹುದು.

...ಸುಜನ ವಿಧೇಯ...
ಶ್ರೀನಿವಾಸತೀರ್ಥಾಚಾರ್ಯ ಹೆಬ್ಬೂರ

## ಟಿಪ್ಪಣೀಕಾರರ ಪರಿಚಯ

**೧. ಶ್ರೀವ್ಯಾಸತೀರ್ಥರು – ಭಾರತಭಾವಪಂಚಿಕಾ**

ಜಗತ್ತು ಎಂದಿಗೂ ಕಾಣದ ಅಚ್ಚರಿಯ ಆಕರ ಶ್ರೀಜಯತೀರ್ಥರು. ಅಧ್ಯಾತ್ಮ ಜೀವನ ಬಹು ಅಲ್ಪ. ಕಾಯಕ ಸಮುದ್ರದಷ್ಟು. ಇಂದಿಗೂ ಪ್ರತಿವಾದಿಗಳಲ್ಲಿ ಇವರಿಗೆ ಎದುರಿಲ್ಲ. ಸಿದ್ಧಾಂತದಲ್ಲಿ ಸಮರಿಲ್ಲ. ವೇದವ್ಯಾಸರೆಂಬ ಸಮುದ್ರದಿಂದ ಹೊರಹೊಮ್ಮಿದ, ಮಾರುತನ ಮಾತಿನಿಂದ ಪಸರಿಸಿದ, ತತ್ವಸುಧೆಯನ್ನು ನ್ಯಾಯಸುಧೆಯ ರೂಪದಿಂದ ಭೂಸುರರಿಗೆ ಉಣಿಸಿದ ವಾಸವ ಈ ಮುನಿ. ಇವರ ಮುಖದಿಂದಲೇ ತತ್ವಜ್ಞಾನದ ಸುಧೆಯನ್ನು ಪಾನಮಾಡಿದವರು ಶ್ರೀವ್ಯಾಸತೀರ್ಥರು. ಈಶ-ಷಟ್ಪ್ರಶ್ನ ಉಪನಿಷತ್‌ಗಳಿಗೆ ಟೀಕೆಯನ್ನು ಬರೆದ ಟೀಕಾಕೃತ್ಪಾದರು, ಉಳಿದ ಉಪನಿಷತ್‌ಗಳಿಗೆ ಬರೆಯುವ ಭಾಗ್ಯ ತಮ್ಮದಾಗಬೇಕೆಂದು ವ್ಯಾಸತೀರ್ಥರು ಬೇಡಿದರೆ, ಇಲ್ಲ ಎನ್ನಲಿಲ್ಲ. ಕಾರಣ ಉಳಿದ ಉಪನಿಷತ್‌ಗಳ ಜ್ಞಾನ ಇವರ ಟೀಕೆಯಿಂದಲೇ ಆಗಬೇಕು. ಇತ್ತೀಚೆಗೆ ಇವರು ಬರೆದ ಈಶಾವಾಸ್ಯಭಾಷ್ಯಟೀಕಾವನ್ನು ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರು ಪ್ರಕಟಿಸಿದ್ದಾರೆ. ಇವರ ಕಾಲ ೧೪ ನೇ ಶತಮಾನ. ಪೀಠವನ್ನು ಬಯಸದೇ ಬಿಡಿ ಸನ್ಯಾಸಿಗಳಾಗಿಯೇ ಸಾಧನವನ್ನು ಮಾಡಿದವರಿವರು. ಮಳಖೇಡದಲ್ಲಿ ಟೀಕಾಕೃತ್ಪಾದರ ಎದುರಿಗೆ ಇವರ ವೃಂದಾವನ ಈಗಲೂ ವಿರಾಜಮಾನವಾಗಿದೆ. ಇವರ ಈ ಕೃತಿ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಚೊಚ್ಚಲು ಟಿಪ್ಪಣೀ. ಇದರ ನಾಮಧೇಯ 'ಭಾರತಭಾವಪಂಚಿಕಾ'. ಸಂಕ್ಷಿಪ್ತವಾಗಿ, ಬಹು ಅರ್ಥಗಂಭೀರವಾದದ್ದು ಇವರ ಟಿಪ್ಪಣಿ. ಅವಶ್ಯವಾದಲ್ಲಿ ಮೂಲದ ಅರ್ಥವನ್ನು ಬರೆಯುವುದನ್ನು ಬಿಟ್ಟಿಲ್ಲ. ಪ್ರಾಯಃ ಮುಂದಿನ ಟಿಪ್ಪಣೀಕಾರರು ಇವರನ್ನು ಅನುಸರಿಸುತ್ತಾರೆ. ಅನೇಕ ಸ್ಥಳಗಳಲ್ಲಿ ಇವರ ವಾಕ್ಯವನ್ನು ಸೇರಿಸಿ ವ್ಯಾಖ್ಯಾನಮಾಡಿದ್ದಾರೆ.

ಇಷ್ಟೇ ಅಲ್ಲದೇ ಇವರು ಅಣುಜಯತೀರ್ಥವಿಜಯ, ಬೃಹತ್‌ಜಯತೀರ್ಥವಿಜಯಗಳನ್ನು ರಚಿಸಿ ಟೀಕಾಕೃತ್ಪಾದರ ಮಹಿಮೆಯನ್ನು ಸಾರಿದ್ದಾರೆ. ತಂತ್ರಸಾರಕ್ಕೆ ವ್ಯಾಖ್ಯಾನ ರಚಿಸಿರುವದಾಗಿ ಪ್ರತೀತಿ ಇದೆ. ಪ್ರಮಾಣಮಾಲಿಕಾ ಎಂಬ ಗ್ರಂಥವನ್ನು ರಚಿಸಿರುವದಾಗಿ ಉಲ್ಲೇಖ ಉಂಟು.

**೨. ಶ್ರೀವೇದಾಂಗತೀರ್ಥರು – ತಾತ್ಪರ್ಯದೀಪಿಕಾ**

ಮಾಧವನ ಮಮತೆಯ ಮಗು ಆಚಾರ್ಯ ಮಧ್ವರು. ಅವರ ಅನುಜನಾಗಿ ಹುಟ್ಟುವ ಭಾಗ್ಯ ಪಡೆದವರು ಶ್ರೀವಿಷ್ಣುತೀರ್ಥರು. ಅನುಗ್ರಹಪೂರ್ವಕವಾಗಿ ಆಚಾರ್ಯರು ಕರುಣಿಸಿದ ಭೂವರಾಹದೇವರ ಆರಾಧಕರು. ಆಚಾರ್ಯರ ಮುಖದಿಂದ ಸಕಲ ವಿದ್ಯೆಯನ್ನು ಪಡೆದು ಯೋಗಿಗಳಿಂದಲೂ ಮಾಡಲಾಗದ ತಪಸ್ಸಿನಿಂದ ಹರಿಯನ್ನು ಪ್ರತ್ಯಕ್ಷ ಕಂಡವರು. ಅವರ ದಿವ್ಯಪರಂಪರೆಯಲ್ಲಿ ಬಂದವರು ಕುಂಭಾಸಿ ಮಠದ ಯತಿಗಳು. (ಸೋದಾ ಮಠ) ಈ ಪರಂಪರೆಯಲ್ಲಿ ೧೩ನೆಯವರು ಶ್ರೀವೇದಾಂಗತೀರ್ಥರು. ಇವರ ವೃಂದಾವನ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಿದ್ಧಾಪುರ ಪ್ರಾಂತದ ಶಾಲ್ಮಲೀ ನದಿತೀರದ ಬಿಳಗಿ ಎಂಬ ಹಳ್ಳಿಯಲ್ಲಿ ವಿರಾಜಮಾನವಾಗಿದೆ. ಇವರ ವ್ಯಾಖ್ಯಾನ ಶ್ರೀವ್ಯಾಸತೀರ್ಥರ ಟಿಪ್ಪಣಿಗಿಂತಲು ಸ್ವಲ್ಪ ವಿಸ್ತಾರವಾಗಿದೆ. ಇದರ ನಾಮಧೇಯ '**ತಾತ್ಪರ್ಯದೀಪಿಕಾ**'. ೪ನೇ ಅಧ್ಯಾಯದಿಂದ ಮುಂದೆ ಮಾತ್ರ ಉಪಲಬ್ಧವಾಗಿದೆ. ಪ್ರಾಯಃ ಮುಂದಿನ ಅನೇಕ ಟಿಪ್ಪಣಿಕಾರರು ಇವರ ಟಿಪ್ಪಣಿಯನ್ನು ಅನುಸರಿಸುತ್ತಾರೆ. ಶ್ರೀವಿದ್ಯಾಧೀಶತೀರ್ಥರ ಶಿಷ್ಯರಾದ ಮಧುಸೂದನಭಿಕ್ಷುಗಳು

ಇವರ ಟಿಪ್ಪಣಿಯನ್ನು ಹಲವೆಡೆ ವಿಮರ್ಶಿಸುತ್ತಾರೆ. ಕೆಲವು ಸ್ಥಳಗಳಲ್ಲಿ ಕಠಿಣವಾದ ಶಬ್ದಗಳಿಗೆ ಮಾತ್ರ ವ್ಯಾಖ್ಯಾನ ಮಾಡಿ ಮೂಲದ ಅರ್ಥ ಅನಾಯಸವಾಗಿ ಆಗಲು ಉಪಕಾರಕವಾಗಿದೆ ಈ ಟಿಪ್ಪಣಿ. ಇವರ ಮತ್ತೊಂದು ಕೃತಿ ಸುಮಧ್ವವಿಜಯ ಟಿಪ್ಪಣಿ.

**೩. ಶ್ರೀವಾದಿರಾಜತೀರ್ಥರು - ಭಾವಪ್ರಕಾಶಿಕಾ**

ಕವಿತಾ, ಸಾಹಿತ್ಯ, ಸುಂದರ ಸರಸ ಅಲಂಕಾರಗಳು, ನವರಸಗಳು, ಲಲಿತ ಪದಗಳು, ನವ ನವೀನ ಕಲ್ಪನೆಗಳು ಶ್ರೀಹರಿಯ ಮಹಿಮೆಗಳನ್ನು ಹೊಗಳಿದಾಗ ಮಾತ್ರ ಸಾರ್ಥಕವಾಗುತ್ತದೆ ಎಂದು ಭಾಗವತ ಸಾರುತ್ತದೆ. ಈ ಮಾತನ್ನು ನೂರರಷ್ಟು ಪಾಲಿಸಿದವರು ಶ್ರೀವಾದಿರಾಜತೀರ್ಥರು. ಕಾಳಿದಾಸ, ದಂಡಿ, ಮಾಘ ಮೊದಲಾದವರನ್ನು ಮೀರಿಸುವ ಉಪಮಾ, ಪದಲಾಲಿತ್ಯ, ಪದಬಂಧ, ಯಮಕಗಳನ್ನು ಈ ಮಹಾನುಭಾವರ ರುಕ್ಮಿಣೀಶವಿಜಯ ಮುಂತಾದ ಕಾವ್ಯಗಳಲ್ಲಿ ನಾವು ಕಾಣಬಹುದು. ಶಾಸ್ತ್ರದಲ್ಲಿ ನುರಿತವರಿಗೆ ಕಾವ್ಯಶ್ರೀ ಇಲ್ಲ. ಕವಿತೆ ಬಲ್ಲವರಿಗೆ ಶಾಸ್ತ್ರಶೂನ್ಯ. ಇದಕ್ಕೆ ಅಪವಾದ ಶ್ರೀವಾದಿರಾಜರು. ಇವರ ಕೃತಿಗಳು ಕೇವಲ ಜನಮನೋರಂಜಕ ರಚನೆಗಳಾಗದೆ ಜಿಜ್ಞಾಸುಗಳಿಗೆ ಸರಳವಾಗಿ ಸಿದ್ಧಾಂತವನ್ನು ತಿಳಿಸುವ ತತ್ತ್ವಗ್ರಂಥಗಳೂ ಆಗಿವೆ. ಅತಿ ಕಠಿಣತತ್ವಗಳನ್ನು ಸರಳವಾಗಿ ನಿರೂಪಿಸುವುದು ಶ್ರೀವಾದಿರಾಜರ ವೈಶಿಷ್ಟ್ಯ. ೧೨೦ ವರ್ಷಗಳ ತುಂಬು ಸನ್ಯಾಸ ಜೀವನವನ್ನು ನಡೆಸಿದವರು. ಶ್ರೀಮದಾಚಾರ್ಯರ ಅನುಜರಾದ ಶ್ರೀವಿಷ್ಣುತೀರ್ಥರ ಸೋದಾ ಮಠದಲ್ಲಿ ಬಂದ ೨೦ನೇ ಯತಿಗಳಿವರು. ಅನನ್ಯ ಭಕ್ತಿಯಿಂದ ಹಯಗ್ರೀವದೇವರನ್ನು ಒಲಿಸಿಕೊಂಡವರು. ತಪೋಮೂರ್ತಿಗಳು. ತೋರಿದ ಪವಾಡ ಬೆಟ್ಟದಷ್ಟು. ನಮಗೆ ತಿಳಿದಿರುವುದು ಎಳ್ಳಷ್ಟು. ಸಂಸ್ಕೃತ, ಕನ್ನಡ, ತುಳು ಭಾಷೆಗಳಲ್ಲಿ ನೂರಾರು ಗ್ರಂಥ ಪದ-ಪದ್ಯ ಸುಳಾದಿಗಳನ್ನು ರಚಿಸಿ ಸಾಮಾನ್ಯ ಜನತೆಗೂ ಮಧ್ವಸಿದ್ಧಾಂತವನ್ನು ಮುಟ್ಟಿಸಿದವರು. ತಾಯಿಯ ಹರಕೆಯನ್ನು ತೀರಿಸುವ ನೆಪದಲ್ಲಿ 'ಮಹಾಭಾರತಲಕ್ಷಾಲಂಕಾರ' ಗ್ರಂಥವನ್ನು ಬರೆದವರು ಶ್ರೀವಾದಿರಾಜರು. ಶ್ರೀಮದಾಚಾರ್ಯರ ಅನೇಕ ಗ್ರಂಥಗಳಿಗೆ ವ್ಯಾಖ್ಯಾನ ಮಾಡಿರುತ್ತಾರೆ. ಅನೇಕ ಸ್ವತಂತ್ರ ಗ್ರಂಥಗಳನ್ನು ರಚಿಸಿರುತ್ತಾರೆ. ಅವರ ಅನೇಕ ಗ್ರಂಥರತ್ನಗಳಲ್ಲಿ 'ಮಹಾಭಾರತ-ತಾತ್ಪರ್ಯನಿರ್ಣಯ ಭಾವಪ್ರಕಾಶಿಕಾ' ಶ್ರೇಷ್ಠಗ್ರಂಥರತ್ನವಾಗಿದೆ. ಅನೇಕ ಅಪೂರ್ವವಿಷಯಗಳನ್ನು ಒಳಗೊಂಡಿರುವುದು ಈ ಟಿಪ್ಪಣಿ.

ಉದಾ :- ವ್ಯತ್ಯಾಸ, ಪ್ರಾತಿಲೋಮ್ಯ ಎಂಬ ಎರಡು ರೀತಿಯಾದ ವ್ಯಾಖ್ಯಾಭೇದಗಳಿಗೆ ಉದಾಹರಣೆಯನ್ನು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಉಳಿದ ಐದು ಪ್ರಭೇದಗಳನ್ನು ಉದಾಹರಣೆ ಸಹಿತವಾಗಿ ವಿವರಣೆ ಮಾಡಿದವರು ಶ್ರೀವಾದಿರಾಜರು. ಹೀಗೆ ಶ್ರೀಮದಾಚಾರ್ಯರ ಭಾವವನ್ನು ಜಿಜ್ಞಾಸುಗಳಿಗೆ ಮನಮುಟ್ಟುವಂತೆ ವ್ಯಾಖ್ಯಾನ ಮಾಡಿ ಪರಮಾನುಗ್ರಹಮಾಡಿದ್ದಾರೆ.

**೪. ಶ್ರೀಸತ್ಯಾಭಿನವತೀರ್ಥರು - ದುರ್ಘಟಾರ್ಥಪ್ರಕಾಶಿಕಾ**

ದ್ವೈತಸಿದ್ಧಾಂತದ ಅಭಿನವ ವಿಶ್ವಾಮಿತ್ರರು ಶ್ರೀಮದುತ್ತರಾದಿಮಠಾಧೀಶರಾದ ಶ್ರೀಸತ್ಯನಾಥ-ತೀರ್ಥರು. ಹೊಸರೀತಿಯ ವಿಚಾರ, ನವೀನ ಪರಿಷ್ಕಾರಪದ್ಧತಿ, ವಿಲಕ್ಷಣ ವಾಕ್ಯಾರ್ಥರೀತಿ ಇವುಗಳನ್ನು ಇವರ ಗ್ರಂಥಗಳಾದ ಅಭಿನವಚಂದ್ರಿಕಾ, ಅಭಿನವತಾಂಡವ, ಅಭಿನವಗದಾ, ಅಭಿನವಾಮೃತ ಮುಂತಾದಗ್ರಂಥಗಳಲ್ಲಿನಾವುಕಾಣುತ್ತೇವೆ. ಇವರಅಚ್ಚು-ಮೆಚ್ಚಿನಶಿಷ್ಯರುಶ್ರೀಸತ್ಯಾಭಿನವತೀರ್ಥರು. ಇವರ ಪೂರ್ವಾಶ್ರಮದ ಹೆಸರು ಅತ್ಕಾರ್ಷಿ ನರಸಿಂಹಾಚಾರ್ಯರು. ಇವರ ತಂದೆ ಸುಮತಿಯತಿಗಳು.

ಅವರು ಶ್ರೀಮದುತ್ತರಾದಿಮಠದ ಶ್ರೀಸತ್ಯನಿಧಿತೀರ್ಥರ ಶಿಷ್ಯರು. ಶ್ರೀಸತ್ಯನಿಧಿಗಳ ಅನುಗ್ರಹವೂ ನರಸಿಂಹಾಚಾರ್ಯರು ಉತ್ತರಾದಿ ಮಠಾಧೀಶ- ರಾಗುವದಕ್ಕೆ ಮುಖ್ಯಕಾರಣ. ಭುಕ್ತಿಯಿಂದ ಮುಕ್ತಿಯವರೆಗೆ ಏನನ್ನೇ ಸಾಧಿಸಬೇಕಾದರೂ ಅದಕ್ಕೆ ಗುರುಭಕ್ತಿ-ಗುರುಶಕ್ತಿಬೇಕು. ಅದಕ್ಕೆ ಉತ್ತಮ ಉದಾಹರಣೆ ಶ್ರೀಸತ್ಯಾಭಿನವರು.

ಗುರುಭಕ್ತಿಯ ಸಾಕಾರ ಮೂರ್ತಿ. ಗುರುಗಳನ್ನು ತಮ್ಮ ತಾಯಿ-ತಂದೆ-ಅಣ್ಣ-ಸಕಲವೂ ಆಗಿದ್ದಾರೆಂದು ಶಿಷ್ಯರು ಸೇವಿಸಬೇಕೆಂದು ತೋರಿಸಿದವರು ಮತ್ತು ಹಾಗೆ ಸೇವಿಸಿದವರು. ದೇಶದಲ್ಲಿ ವಿಧರ್ಮೀಯರ ಅಟ್ಟಹಾಸ ಮೆರೆಯುತ್ತಿದ್ದಾಗಲೂ ಗುರುಸ್ಮರಣೆಯಿಂದ ಸಕಲ ಆಪತ್ತಿನ ಪರಿಹಾರ ಕಂಡು ನಿರ್ವಿಘ್ನವಾಗಿ ಪಾಠ-ಪ್ರವಚನ, ವಾದಿವಿಜಯ, ದೇಶದಿಗ್ವಿಜಯಗಳನ್ನು ಮಾಡಿದವರು. ಶ್ರೀಸತ್ಯನಾಥತೀರ್ಥರ ಸಂಪೂರ್ಣಾನುಗ್ರಹ ಪಾತ್ರರೆಂದು ಹೇಳಿದರೆ ತಪ್ಪಾಗಲಾರದು.

'ನಿನ್ನಿಂದ ಭಾಗವತ ಟಿಪ್ಪಣಿಯನ್ನು ಬರೆಸುವೆ' ಎಂಬ ಶ್ರೀಸತ್ಯನಾಥತೀರ್ಥರ ಅಮೋಘಸಂಕಲ್ಪವೇ ಭಾಗವತ ಟಿಪ್ಪಣಿಯನ್ನು ಬರೆಸಿತು ಎಂದು ತಮ್ಮ ಭಾಗವತಟಿಪ್ಪಣಿಯಲ್ಲಿ ಹೇಳಿದರೆ, ಮಹಾಭಾರತತಾತ್ಪರ್ಯನಿರ್ಣಯ ಟಿಪ್ಪಣಿಯಲ್ಲಿ 'ಶ್ರೀಸತ್ಯನಾಥತೀರ್ಥರ ಪಾದಪೀಠಪೂಜೆಯನ್ನು ಮಾಡಿದ ಪುಣ್ಯಲೇಶದಿಂದ ಈ ಟಿಪ್ಪಣಿಯನ್ನು ಬರೆಯಲು ಸಾಧ್ಯವಾಯಿತೆಂದು ಗುರುಗಳನ್ನು ಅನನ್ಯ ಭಕ್ತಿಯಿಂದ ಸ್ಮರಿಸುತ್ತಾರೆ.

ತಮ್ಮ ಗುರುಗಳ ಮಾಹಾತ್ಮ್ಯವನ್ನು ತಮ್ಮ ಅಮೂಲ್ಯವಾದ ಶ್ರೀಸತ್ಯನಾಥಾಭ್ಯುದಯ ಮುಂತಾದ ಗ್ರಂಥಗಳಲ್ಲಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಅವರ ಅಮೂಲ್ಯ ಕೃತಿ ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯವ್ಯಾಖ್ಯಾನ 'ದುರ್ಘಟಾರ್ಥಪ್ರಕಾಶಿಕಾ'. ಶ್ರೀಪಾದರು ಕೆಲವೇ ಶ್ಲೋಕಗಳಿಗೆ ವ್ಯಾಖ್ಯಾನ ಮಾಡಿದರೂ, ಶ್ರೀಮದಾಚಾರ್ಯರ ವಾಕ್ಯದಲ್ಲಿ ಮೇಲೆ ತೋರುವ ವೈಯರ್ಥ್ಯ, ಅನನ್ವಯ, ಪುನರುಕ್ತಿ, ಅಸಂಗತಿ ಮುಂತಾದ ದೋಷಗಳನ್ನು ಪರಿಹಾರ ಮಾಡಿದ್ದಾರೆ. ಮೊದಲಿಗೆ ಶ್ಲೋಕಕ್ಕೆ ಅನ್ವಯಾರ್ಥವನ್ನು ಹೇಳುತ್ತಾರೆ. ಅನಂತರ ಅದರಿಂದ ಪರಿಹಾರವಾದ ದೋಷಗಳನ್ನು ತೋರಿಸಿ, ಉಪಸಂಹಾರ ಮಾಡುವುದು ಇವರ ಟಿಪ್ಪಣಿಯ ವಿಶೇಷತೆ.

ಅವರ ಕೃತಿಗಳು ೧.ಮಹಾಭಾರತತಾತ್ಪರ್ಯನಿರ್ಣಯ ದುರ್ಘಟಾರ್ಥಪ್ರಕಾಶಿಕಾ, ೨.ಭಾಗವತತಾತ್ಪರ್ಯನಿರ್ಣಯ ದುರ್ಘಟಾರ್ಥಪ್ರಕಾಶಿಕಾ, ೩.ಶ್ರೀಸತ್ಯನಾಥಗುರುಸ್ತುತಿ, ೪. ಸ್ವೋಪಜ್ಞ ವ್ಯಾಖ್ಯಾಸಮೇತ ರಾಮಾಮೃತಮಹಾರ್ಣವ.

### ೫. ಶ್ರೀಮಧುಸೂದನಭಿಕ್ಷುಗಳು - ಪ್ರಮಾಣಸಂಗ್ರಹ

ಶ್ರೀಮದಾನಂದತೀರ್ಥಭಗವತ್ಪಾದರು ಸತ್ಸಿದ್ಧಾಂತವನ್ನು ಪ್ರತಿಷ್ಠೆ ಮಾಡುವದಕ್ಕಾಗಿ ಅನೇಕ ಶ್ರುತಿ, ಸ್ಮೃತಿ, ಪುರಾಣ ಗ್ರಂಥಗಳನ್ನು ಉದಾಹರಿಸುತ್ತಾರೆ. ಆ ಗ್ರಂಥಗಳು ಈಗ ಉಪಲಬ್ಧವಾಗಿಲ್ಲ. ಉಪಲಬ್ಧವಾದ ಗ್ರಂಥಗಳಲ್ಲೂ ಅನೇಕ ವಾಕ್ಯಗಳು ಈಗ ನಮಗೆ ಸಿಗುವುದಿಲ್ಲ. ಹಾಗಾಗಿ ಶ್ರೀಮದಾಚಾರ್ಯರು ಅಪ್ರಾಮಾಣಿಕವಾದ ಅಥವಾ ಸ್ವಕಪೋಲಕಲ್ಪಿತವಾದ ಸಿದ್ಧಾಂತವನ್ನು ಹೇಳುತ್ತಾರೆ ಎಂದು ಅನೇಕ ಅಜ್ಞಾನಿಗಳು ಮಾತಾಡುತ್ತಾರೆ. ಈ ಆಕ್ಷೇಪಕ್ಕೆ ಮೊಟ್ಟಮೊದಲು ಉತ್ತರವನ್ನು ಮಹಾಭಾರತತಾತ್ಪರ್ಯನಿರ್ಣಯದ ವಿಷಯದಲ್ಲಿ ಕೊಟ್ಟವರು ಶ್ರೀಮಧುಸೂದನ ಭಿಕ್ಷುಗಳು. ಇವರು ಉತ್ತರಾದಿಮಠಾಧೀಶರಾದ ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರ ಶಿಷ್ಯರು. ಅದನ್ನು ತಮ್ಮ ಗ್ರಂಥದ ಆದಿಯಲ್ಲಿ ತಾವೇ ಹೇಳಿದ್ದಾರೆ.

ವಿದ್ಯಾಧೀಶಕರಾಬ್ಜೋತ್ಥಮಧುಸೂದನಭಿಕ್ಷುಕಃ ।
ತನುತೇ ಭಾರತಾರ್ಥಸ್ಯ ನಿರ್ಣಯೇ ಮಾನಸಂಗ್ರಹಮ್ ॥

ಅನೇಕ ಪುರಾಣಗಳು, ಮಹಾಭಾರತ, ಹರಿವಂಶ, ರಾಮಾಯಣ, ಸ್ಮೃತಿಗಳಿಂದ ಶ್ರೀಮದಾಚಾರ್ಯರು ಹೇಳಿದ ಪ್ರಮೇಯಗಳಿಗೆ ಅನುಕೂಲವಾದ ಪ್ರಮಾಣಗಳನ್ನು ಹುಡುಕಿ ಉದಾಹರಿಸುತ್ತಾರೆ. ರಾಮ-ಪರಶುರಾಮರ ಸಮಾಗಮ ಸಮಯದಲ್ಲಿ ರಾಮದೇವರು ಪರಶುರಾಮ ದೇವರದೇಹದಲ್ಲಿದ್ದ ಅತುಲನಾಮಕ ಅಸುರನನ್ನು ಸಂಹಾರಮಾಡಿದರು ಎಂದು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಈ ವಿಷಯಕ್ಕೆ ಆಧಾರವಾಗಿ ಮಧುಸೂದನಭಿಕ್ಷುಗಳು ತಮ್ಮ ಟಿಪ್ಪಣಿಯಲ್ಲಿ ಪದ್ಮಪುರಾಣದ ವಚನವನ್ನು ಉದಾಹರಿಸಿದ್ದಾರೆ. ಅದೇ ರೀತಿಯಾಗಿ ಶಾರ್ಙ್ಗಗಾಂಡೀವ ಪಿನಾಕಧನುಸ್ಸುಗಳ ಉತ್ಪತ್ತಿಯ ರೋಚಕ ಕಥೆ, ಸಮುದ್ರತರಣ ಸಂದರ್ಭದಲ್ಲಿ ಹನುಮಂತದೇವರೇ ಏಕೆ ಸಮುದ್ರದಾಟಬೇಕಾಯಿತು ಎನ್ನುವದಕ್ಕೆ ಕಾರಣ, ವಿಶ್ವಾಮಿತ್ರರ ಬ್ರಾಹ್ಮಣ್ಯಕ್ಕೆ ಯಾರು ಯಾರು ಅನುಗ್ರಹ ಮಾಡಿದವರು ಹೀಗೆ ಅನೇಕ ವಿಷಯಗಳಲ್ಲಿ ತಮ್ಮದೇ ಆದ ಅಪೂರ್ವ ಕೊಡುಗೆಯಾಗಿ ಈ ಟಿಪ್ಪಣಿಯನ್ನು ರಚಿಸಿದ್ದಾರೆ. ತಮ್ಮ ಗ್ರಂಥದಲ್ಲಿ ತಮಗಿಂತ ಪೂರ್ವಟೀಕಾಕಾರರಾದ ವ್ಯಾಸತೀರ್ಥರು, ವೇದಾಂಗತೀರ್ಥರು, ಆದ್ಯವರದರಾಜಾಚಾರ್ಯರು, ಅನಂತಭಟ್ಟರು ಇವರುಗಳನ್ನು ಉದಾಹರಿಸುತ್ತಾರೆ. ಈ ಗ್ರಂಥಗಳ ಅಧ್ಯಯನಮಾಡಿ ವ್ಯಾಖ್ಯಾನ ಮಾಡುತ್ತೇನೆ ಎಂದು ವಿನಯದಿಂದ ಹೇಳುತ್ತಾರೆ. ಇವರ ಬಗೆಗೆ ಹೆಚ್ಚಿನ ಯಾವ ವಿವರವೂ ತಿಳಿದಿಲ್ಲ. ಇತರ ಗ್ರಂಥಗಳು ಉಪಲಬ್ಧವಾಗಿಲ್ಲ.

**೬. ಆದ್ಯ ವರದರಾಜಾಚಾರ್ಯರು – ಮಂದಸುಬೋಧಿನೀ**

ಆದ್ಯ ವರದರಾಜಾಚಾರ್ಯರು ಮಣ್ಣೂರಿನವರು. ಇವರ ತಂದೆ ಶೇಷದಾಸಾಚಾರ್ಯರು. ಇವರು ಶ್ರೀಮದುತ್ತರಾದಿಮಠಾಧೀಶರಾದ ಬ್ರಹ್ಮಾಪರೋಕ್ಷಿಗಳಾದ ಶ್ರೀರಘುನಾಥತೀರ್ಥರ ಹತ್ತಿರ ಸಮಗ್ರಮಧ್ವಶಾಸ್ತ್ರವನ್ನು ಅಧ್ಯಯನಮಾಡಿ ಸಮಕಾಲೀನ ಪಂಡಿತಮೂರ್ಧನ್ಯರಾದರು. ನಿರಂತರ ಪಾಠ-ಪ್ರವಚನ ಮಾಡಿದವರು. ಇವರನ್ನು ಶ್ರೀರಘುನಾಥತೀರ್ಥರು ಒಮ್ಮೆ ಪಂಡಿತರ ಸಭೆಯಲ್ಲಿ ನಿಮ್ಮ ವಂಶದವರಿಗೆ ಮಠದಲ್ಲಿ ಮೊದಲು ತೀರ್ಥ, ಮೊದಲು ಮರ್ಯಾದೆ ಎಂದು ಆದ್ಯ ಮರ್ಯಾದೆಯನ್ನು ಅನುಗ್ರಹಿಸಿದರು. ಕಾರಣ ಆದ್ಯರೆಂದು ಆಗಿನಿಂದ ಉಪನಾಮ ಭೂಷಿತರಾದರು. ಇವರಿಗೆ ತಮ್ಮ ಆರಾಧ್ಯದೈವನಾದ ಮಣ್ಣೂರಿನ ಕೇಶವದೇವರಲ್ಲಿ ನಿಃಸ್ಸೀಮ ಭಕ್ತಿ. ಅದನ್ನು ಅವರು ರಚಿಸಿರುವ ಚೆನ್ನಕೇಶವಾಷ್ಟಕ ಎತ್ತಿ ತೋರಿಸುತ್ತದೆ. ತಾತ್ಪರ್ಯನಿರ್ಣಯಕ್ಕೆ ಉಪಲಬ್ಧವಿರುವ ಗೃಹಸ್ಥ ಟಿಪ್ಪಣಿಕಾರರ ಮಾಹಿತಿಯನ್ನು ಅವಲೋಕಿಸಿದರೆ ಮೊಟ್ಟಮೊದಲಿಗರು ಆದ್ಯ ವರದರಾಜಾಚಾರ್ಯರು. ಮಹಾಭಾರತತಾತ್ಪರ್ಯನಿರ್ಣಯಕ್ಕೆ ಉಪಲಬ್ಧವಾಗಿರುವ 'ಮಂದಸುಬೋಧಿನೀ' ಟಿಪ್ಪಣೀ ಆದ್ಯ ವರದರಾಜಾಚಾರ್ಯರ ಕೃತಿಯಾಗಿದೆ. ಈ ವಿಷಯದಲ್ಲಿ ವಿವಾದವಿಲ್ಲ. ಇದನ್ನು, ಆದ್ಯ ವರದರಾಜಾಚಾರ್ಯರ ಮೊಮ್ಮಕ್ಕಳ ಮೊಮ್ಮಕ್ಕಳು ಇಮ್ಮಡಿ ವರದರಾಜಾಚಾರ್ಯರು, ಕನ್ನಡ ಭಾಷೆಯಲ್ಲಿ ತಾವು ಬರೆದ ಶ್ರೀಮದ್ಭಗವದ್ಗೀತಾಟೀಕಾದ ಅಂತ್ಯದಲ್ಲಿ ಹೀಗೆ ಹೇಳಿದ್ದಾರೆ -

ಆಸೀದ್ವರದರಾಜಾರ್ಯಃ ಶೇಷದಾಸಾರ್ಯಸಂಭವಃ ।
ಆಸಾದಿತಗುರುಪ್ರೀತಿರೀಶಾಚಲಿತಭಕ್ತಿಭಾಕ್ ॥

ಸ ಶ್ರೀರಘುನಾಥತೀರ್ಥಮುಖತೋ ಬ್ರಹ್ಮಾಪರೋಕ್ಷಜ್ಞತಃ
ಶ್ರೀಮನ್ಮಧ್ವನಯಂ ಮಹಾಸುಖಕರಂ ಶುಶ್ರಾವ ಭಕ್ತ್ಯಾನ್ವಿತಃ ।
ಶಿಷ್ಯಾನಪ್ಯುಪದಿಶ್ಯ ಶಾಸ್ತ್ರಮಖಿಲಂ ಶ್ರೀಮಧ್ವಮೌನೀರಿತಂ
ಮೇದಿನ್ಯಾಂ ಪ್ರಕಟೀಚಕಾರ ಮತಿಮಚ್ಛಿಷ್ಯಪ್ರಶಿಷ್ಯಾದಿಭಿಃ ॥

ಅಸ್ಮಚ್ಛಿಷ್ಯಪ್ರಶಿಷ್ಯಪ್ರಭೃತಿಯತಿಗಣ (ಣಾಃ) ರಾಮಪೂಜಾನಿಯುಕ್ತಾಃ
ಶ್ರೀಪಾದಾಃ ಪ್ರಾಶ್ಯತೀರ್ಥಂ ಸ್ವಯಮಥ ಪರಿಷತ್ಪ್ರಾಪ್ತವಿದ್ವಜ್ಜನೇಭ್ಯಃ ।
ಆದೌ ತ್ವದ್ವಂಶಜೇಭ್ಯಃ ದದತು ಶುಚಿಕರಂ ತೀರ್ಥಮಗ್ರೇ ಚ ಪೂಜ್ಯಾಃ
ಸಂತು ತ್ವದ್ವಂಶಜಾತಾ ಇತಿ ವರಮದದಾತ್ತದ್ಗುರುಃ ಪ್ರೀತಿತೋಽಸ್ಮೈ ॥

ಸ ಸತಾಮುಪಕಾರಾಯ ಸಂಪ್ರದಾಯಜ್ಞಶೇಖರಃ ।
ಟೀಕಾಂ ಭಾರತತಾತ್ಪರ್ಯನಿರ್ಣಯಸ್ಯಾಕರೋತ್ ಸುಧೀಃ ॥

ವರದರಾಜಾಚಾರ್ಯರು ತಮಗಿಂತಲೂ ಹಿಂದೆ ಇದ್ದ ವ್ಯಾಖ್ಯಾನಕಾರರ ಅಭಿಪ್ರಾಯವನ್ನು ಉದಾಹರಿಸುತ್ತಾರೆ. (ಅತ್ರ ಟಿಪ್ಪಣೀಕಾರಾಃ- ದ್ವೀಪೇಷು ಸಪ್ತಸು ಇತ್ಯೇತತ್ ಜಂಬೂಪ್ಲಕ್ಷಾದಿಷು ಇತಿ ವ್ಯಾಖ್ಯಾತಾಃ) ಈ ವಾಕ್ಯಗಳು ಈಗ ಉಪಲಬ್ಧವಿರುವ ವ್ಯಾಸತೀರ್ಥೀಯ ಅಥವಾ ವೇದಾಂಗತೀರ್ಥೀಯ ಟಿಪ್ಪಣಿಯಲ್ಲಿ ಉಪಲಬ್ಧವಾಗಿಲ್ಲ. ಆದ್ದರಿಂದ ಇವರಿಬ್ಬರಲ್ಲದೇ ಇನ್ನು ಬೇರೆ ವ್ಯಾಖ್ಯಾನಕಾರರು ಇದ್ದರು ಎಂದು ಊಹಿಸಬಹುದು.

**೭. ಅನಂತಭಟ್ಟರು - ತಂತ್ರಮಾಲಾ (ಸತ್ತತ್ವಮಾಲಾ)**

ಅನಂತಭಟ್ಟರ ತಂದೆ ನರಸಿಂಹಾಚಾರ್ಯರು. ಅವರು ಹೈದರಾಬಾದ ಪ್ರಾಂತದ ಚೇಟಿ ಹಳ್ಳಿಯವರು. ಅತ್ರಿ ಗೋತ್ರದವರು. ಋಗ್ವೇದಿಗಳು. ಮಹಾಶ್ರೀಮಂತರು. ಔದಾರ್ಯದಿಂದ ತಮ್ಮ ಸೋದರರಿಗೆ ಎಲ್ಲವನ್ನು ಕೊಟ್ಟು ತಾವು ದಕ್ಷಿಣದೇಶಸಂಚಾರ ಮಾಡಿದರು. ಶ್ರೀರಂಗನಾಥನ ದಿವ್ಯ ಸನ್ನಿಧಾನದಿಂದ ಪರಮ ಪಾವನವಾದ ಶ್ರೀರಂಗಕ್ಷೇತ್ರದಲ್ಲಿ ನಿಂತು ಬಹು ಕಾಲ ಪಾಠ-ಪ್ರವಚನ ಮಾಡಿದರು. ಅವನನ್ನೇ ಕುಲದೈವವೆಂದು ಆರಾಧಿಸುತ್ತಿರಬಹುದು. ಅಂತೆಯೇ 'ಪ್ರೀತ್ಯೈ ರಂಗೇಶಮಧ್ವಯೋಃ' ಎಂದು ಅನಂತಭಟ್ಟರು ತಮ್ಮ ತಾತ್ಪರ್ಯನಿರ್ಣಯ ಟಿಪ್ಪಣಿಯ ಉಪಸಂಹಾರದಲ್ಲಿ ಹೇಳಿದ್ದಾರೆ. ಅನಂತರ ನರಸಿಂಹಾಚಾರ್ಯರು ಶ್ರೀಮುಷ್ಣಂ ಗೃಹಸ್ಥರ ಪ್ರಾರ್ಥನೆಯಂತೆ ಅಲ್ಲಿ ನೆಲೆಸಿದರು. ಅಂದಿನಿಂದ ಶ್ರೀಮುಷ್ಣಂ ಎಂದು ಉಪನಾಮವಾಯಿತು. ಈ ಮನೆತನದವರಿಗೆ ಶ್ರೀಮುಷ್ಣದ ವರಾಹದೇವರ ದೇವಾಲಯದಲ್ಲಿ ವಿಶೇಷ ಮರ್ಯಾದೆ. ಅತ್ಯಂತ ಸುಷ್ಠು ಆಚಾರನಿಷ್ಠರು. ಸುಮಾರು ಇಪ್ಪತ್ತು (೨೦) ಬಾರಿ ಶ್ರೀಮನ್ನ್ಯಾಯಸುಧಾಗ್ರಂಥವನ್ನು ಪಾಠ ಹೇಳಿದವರು. ಇವರ ವಿದ್ಯಾಸಂತತಿ ಬಹಳ. ಅನೇಕ ಯತಿಗಳಿಗೂ ಪೀಠಾಧೀಶ್ವರರಿಗೂ ಪಾಠ ಹೇಳುವ ಪರಮ ಸೌಭಾಗ್ಯ ಅವರದ್ದಾಗಿತ್ತು. ಇವರಲ್ಲಿ ಉಡುಪಿಯ ಶ್ರೀಕೃಷ್ಣಪೂಜಕರಾದ ಎಂಟು ಪೀಠಾಧಿಪತಿಗಳು ಮತ್ತು ಶ್ರೀರಾಮನ ಆರಾಧಕರಾದ ಅನೇಕ ಪರಿವ್ರಾಜಕರು ಅಧ್ಯಯನ ಮಾಡಿದ್ದಾರೆ. ಬೇರೆ ಬೇರೆ ದೇಶದಿಂದ ಬಂದು ಅನೇಕರು ಇವರಲ್ಲಿ ಹಣೆ ಮಣಿದು ಓದಿದರು. ತಾಮ್ರಪರ್ಣೀ ಮನೆತನ ಮೂಲಪುರುಷರಾದ ನಾರಾಯಣಾಚಾರ್ಯರೂ ನರಸಿಂಹಾಚಾರ್ಯರ ಪ್ರಿಯ ಶಿಷ್ಯರು. ಅದನ್ನು ತಾರತಮ್ಯ ಪಾರಿಜಾತ ಎಂಬ ಗ್ರಂಥದಲ್ಲಿ ಅನಂತಭಟ್ಟರು ಉಲ್ಲೇಖಿಸುತ್ತಾರೆ.

ಅಷ್ಟೌ ಹಿ ತೌಲವಾಃ ಕೃಷ್ಣಚರಣಾಂಭೋರುಹಾರ್ಚಕಾಃ ।
ಶ್ರೀಪಾದಾಃ ರಘುನಾಥಸ್ಯ ತಥಾನ್ಯೇ ಚರಣಾರ್ಚಕಾಃ ॥
ಅನ್ಯೇ ಚ ಬಹುದೇಶಸ್ಥಾಃ ಮಧ್ವಶಾಸ್ತ್ರಂ ಹಿ ಯನ್ಮುಖಾತ್ ॥

ಅದರಂತೆ ಅನಂತಭಟ್ಟರು ಮಹಾಭಾರತತಾತ್ಪರ್ಯನಿರ್ಣಯದ ಟಿಪ್ಪಣಿಯ ಉಪಸಂಹಾರ-ದಲ್ಲಿಯೂ ಹೇಳಿದ್ದಾರೆ.

ಯೇಷಾಂ ಮುಖಾಂಬುಜಾಚ್ಛೃತ್ವಾ ಯತಯೋ ಗೃಹಿಣಸ್ತಥಾ ।
ಅನೇಕಸಂಖ್ಯಾ ವ್ಯಾಚಖ್ಯುಃ ಮಧ್ವಶಾಸ್ತ್ರಂ ನಮಾಮಿ ತಮ್ ॥

ಇವರ ವಂಶದಲ್ಲಿ ಮುಂದೆ ಆರ್ಯಾಚಾರ್ಯರು ಎಂದು ಪ್ರಸಿದ್ಧರಾದ ಜ್ಞಾನಿಗಳಾದರು. ಅವರು ತಮ್ಮ 'ಸಚ್ಛಾಸ್ತ್ರಶ್ರವಣಭೂಷಣ' ಎಂಬ ಗ್ರಂಥದಲ್ಲಿ ನರಸಿಂಹಾಚಾರ್ಯರ ಬಗ್ಗೆ ಹೇಳಿದ್ದಾರೆ. ಅಲ್ಲಿ ನರಸಿಂಹಾಚಾರ್ಯರು ಶ್ರೀವ್ಯಾಸರಾಯರು, ಶ್ರೀವಿಜಯೀಂದ್ರರು, ಶ್ರೀವಾದಿರಾಜರು, ಶ್ರೀವೇದವ್ಯಾಸತೀರ್ಥರು, ಶ್ರೀಯಾದವಾರ್ಯರಿಂದ ಸಮ್ಮಾನಿತರಾಗಿದ್ದರು ಎಂದು ವರ್ಣಿಸುತ್ತಾರೆ.

ಅವರಿಗೆ ನಾಲ್ಕು ಜನ ಮಕ್ಕಳು. ಪೂರ್ಣಬೋಧಾಚಾರ್ಯರು, ಗುಹಾವಾಸೀ ಕೃಷ್ಣಾಚಾರ್ಯರು, ಗೋಪಾಲಾಚಾರ್ಯರು ಮತ್ತು ಅನಂತಾಚಾರ್ಯರು. ಅನಂತಾಚಾರ್ಯರು ಮಹಾವಿದ್ವಾಂಸರು. ತಮ್ಮ ತಂದೆಯ ಪಾದದಡಿಯಲ್ಲಿಯೇ ಸಕಲಶಾಸ್ತ್ರಗಳನ್ನು ಮತ್ತು ಶ್ರೀಮದಾಚಾರ್ಯರ ಗ್ರಂಥಗಳನ್ನು ಅಭ್ಯಸಿಸಿದರು. ಈ ಎಲ್ಲಾ ವಿಷಯವನ್ನು ತಮ್ಮ ವ್ಯಾಖ್ಯಾನದ ಉಪಸಂಹಾರದಲ್ಲಿ ನಿರೂಪಿಸಿದ್ದಾರೆ.

ನರಸಿಂಹಾರ್ಯವರ್ಯಾಣಾಮನಂತಾಖ್ಯೇನ ಸೂನುನಾ ।
ಕೃತಾ ಸತ್ತತ್ತ್ವಮಾಲಾಖ್ಯಾ ಪ್ರೀತ್ಯೈ ರಂಗೇಶಮಧ್ವಯೋಃ ॥

ಯೇಽಧ್ಯಾಪಯಿತ್ವಾ ನಿಗಮಾನ್ ಮಧ್ವಸಿದ್ಧಾಂತಮಾದಿಶನ್ ।
ನರಸಿಂಹಾರ್ಯವರ್ಯಾಂಸ್ತಾನ್ ಭೂಯೋ ಭೂಯೋ ನಮಾಮ್ಯಹಮ್ ॥

ಅದರಂತೆಯೇ, ವಿದ್ಯಾಧೀಶವಿಜಯದಲ್ಲಿ ಶ್ರೀವಿದ್ಯಾಧೀಶತೀರ್ಥಶ್ರೀಪಾದರ ಧರ್ಮಪುರಿ ಚಾತುರ್ಮಾಸ್ಯ ಸಂದರ್ಭದಲ್ಲಿ ಅನಂತಾಚಾರ್ಯರು ಎಂಬುವರ ಉಲ್ಲೇಖವಿದೆ. (೯.೩೨) ಅವರು ಶ್ರೀಮುಷ್ಣಂ ಅನಂತಾಚಾರ್ಯರೇ ಎಂದು ಕೆ.ಟಿ.ಪಾಂಡುರಂಗೀ ಅಭಿಪ್ರಾಯಪಟ್ಟಿದ್ದಾರೆ. ಇವರ ಜೊತೆ ಹೇಳಿದ ನರಸಿಂಹಾಚಾರ್ಯರು ಇವರ ತಂದೆ ಆಗಿರಬಹುದು.

ಅನಂತಭಟ್ಟರ ವ್ಯಾಖ್ಯಾನವನ್ನು ಶ್ರೀವಿದ್ಯಾಧೀಶತೀರ್ಥರ ಶಿಷ್ಯರಾದ ಮಧುಸೂದನ ಭಿಕ್ಷುಗಳು (೬.೨೧) ಮತ್ತು ಜನಾರ್ದನಭಟ್ಟರು (೬.೨೧) ಉದಾಹರಿಸುತ್ತಾರೆ. ಇವರು ತಮ್ಮ ಟಿಪ್ಪಣಿಯಲ್ಲಿ ವಾದಿರಾಜೀಯವನ್ನು (೬.೨೧) ಉದಾಹರಿಸುತ್ತಾರೆ. ಇದರಿಂದ ವಾದಿರಾಜರಿಗೆ ಅರ್ವಾಚೀನರು ಮತ್ತು ಮಧುಸೂದನ ಭಿಕ್ಷುಗಳು ಮತ್ತು ಜನಾರ್ದನಭಟ್ಟರಿಗೆ ಪ್ರಾಚೀನರು ಎಂದು ಸಿದ್ಧವಾಗುತ್ತದೆ. ಮತ್ತು ಇವರು ಶ್ರೀವಿದ್ಯಾಧೀಶತೀರ್ಥರ ಕಾಲದಲ್ಲಿ ಇದ್ದರು ಎಂದು ಹೇಳುವ ಮಾತನ್ನು ಪುಷ್ಟೀಕರಿಸಬಹುದಾಗಿದೆ.

ಇವರು ಅನೇಕ ಕೃತಿರತ್ನಗಳಿಂದ ಜಗತ್ತನ್ನು ಅನುಗ್ರಹಿಸಿದ್ದಾರೆ. ಇವರು ಬರೆದ ಪ್ರಮಾಣಪದ್ಧತಿ ಮತ್ತು ಪ್ರಮಾಣಲಕ್ಷಣ ಟಿಪ್ಪಣಿಗಳು ತಂಜಾವೂರಿನ ಸರಸ್ವತಿ ಮಹಲ್ ಗ್ರಂಥಾಲಯದಲ್ಲಿ

ಉಪಲಬ್ಧವಾಗಿವೆ. ಬೃಹದಾರಣ್ಯಕೋಪನಿಷತ್ ಭಾವಬೋಧಸಂಗ್ರಹ, ಛಾಂದೋಗ್ಯ ಭಾಷ್ಯ ಟಿಪ್ಪಣೀ, ಈಶಾವಾಸ್ಯ ಟಿಪ್ಪಣೀ, ಐತರೇಯ ಟಿಪ್ಪಣೀ, ವಿಷ್ಣುತತ್ವನಿರ್ಣಯ ಟಿಪ್ಪಣೀ, ತತ್ವವಿವೇಕಟಿಪ್ಪಣೀ, ಖಂಡನತ್ರಯ ಟಿಪ್ಪಣೀ, ತತ್ವೋದ್ಯೋತ ಟಿಪ್ಪಣೀ, ಪ್ರಮಾಣ ಲಕ್ಷಣಟಿಪ್ಪಣೀ, ಕಥಾಲಕ್ಷಣ ಟಿಪ್ಪಣೀ, ತತ್ವಪ್ರಕಾಶಿಕಾ ಟಿಪ್ಪಣೀ, ತಾರತಮ್ಯಪಾರಿಜಾತ ಮುಂತಾದ ಗ್ರಂಥಗಳನ್ನು ರಚಿಸಿ ದ್ವೈತಸಿದ್ಧಾಂತ ಜಿಜ್ಞಾಸುಗಳಿಗೆ ಪರಮೋಪಕಾರ ಮಾಡಿದ್ದಾರೆ. ಇವುಗಳಲ್ಲಿ ಈಶಾವಾಸ್ಯಟಿಪ್ಪಣೀ ವಿಶ್ವಮಧ್ವಪರಿಷತ್ (ಉತ್ತರಾದಿಮಠ) ನಿಂದ ಈಗಾಗಲೇ ಪ್ರಕಾಶಿತವಾಗಿದೆ. ಇವುಗಳಲ್ಲಿ ಕೆಲವನ್ನು ತಂಜಾವೂರಿನ ಗ್ರಂಥಾಲಯದಲ್ಲಿ ಮತ್ತು ಕೆಲವನ್ನು ಮದ್ರಾಸ್ ಗ್ರಂಥಾಲಯದಲ್ಲಿ ಕಾಣಬಹುದಾಗಿದೆ.

**೮. ಜನಾರ್ದನಭಟ್ಟರು – ಪದಾರ್ಥದೀಪಿಕಾ**

ಇವರ ತಂದೆ ಹಿರಣ್ಯಾಚಾರ್ಯರು. ಶಮ, ದಮ, ಸ್ವಾಧ್ಯಾಯ, ಹರಿಭಕ್ತಿ ಮುಂತಾದ ಸದ್ಗುಣಗಳ ಆಕರ. ಆಗಿನ ಕಾಲದಲ್ಲಿ ಉತ್ತಮ ವಿದ್ವಾಂಸರು. ತಾಯಿ ಗಂಗಾ. ಇವರು ಅಂಬಾಶಿರ ಎಂಬ ಗ್ರಾಮದವರು. ಇವರು ಜಮದಗ್ನಿ ಗೋತ್ರದವರು. ಇವರ ಉಪಲಬ್ಧವಾದ ಕೃತಿ ಮಹಾಭಾರತ ತಾತ್ಪರ್ಯನಿರ್ಣಯ. ಇವರಿಗೆ ಇಬ್ಬರು ಮಕ್ಕಳು. ಆನಂದತೀರ್ಥಾಚಾರ್ಯರು ಮತ್ತು ವ್ಯಾಸಾಚಾರ್ಯರು. ಅವರಲ್ಲಿ ಆನಂದತೀರ್ಥಾಚಾರ್ಯರು ಮಾಧ್ವಸನ್ನ್ಯಾಸಪದ್ಧತಿ (ಆತ್ಮಶ್ರಾದ್ಧ ಪದ್ಧತಿ) ಎಂಬ ಗ್ರಂಥವನ್ನು ರಚಿಸಿದ್ದಾರೆ. ಅದನ್ನು ಡಾ.ಪ್ರಭಂಜನಾಚಾರ್ಯರು ಪ್ರಕಟಿಸಿದ್ದಾರೆ. ಅದರ ಉಪಸಂಹಾರದಲ್ಲಿ ಹೀಗೆ ಇದೆ.

> ವಿಷ್ಣುತೀರ್ಥೋಕ್ತಿಮಾಶ್ರಿತ್ಯ ಮನುಂ ಬೌಧಾಯನಂ ತಥಾ ।
> ವ್ಯಾಸಾಚಾರ್ಯಸ್ಯಾನುಜೇನ ಕೃತಾತ್ಮಶ್ರಾದ್ಧಪದ್ಧತಿಃ ॥
>
> ಸುಖಸ್ಯಾಧಿಷ್ಠಾನಸಂಸಿದ್ಧ್ಯೈ ಪ್ರೀತ್ಯೈ ಮಧ್ವನೃಸಿಂಹಯೋಃ ।
> ಜಾಮದಗ್ನ್ಯಹಿರಣ್ಯಸ್ಯ ಸುತೋ ಭಟ್ಟಜನಾರ್ದನಃ ॥
> ತತ್ಸುತಾನಂದತೀರ್ಥಸ್ಯ ಕೃತಿರಸ್ತ್ವರ್ಪಿತಾ ಹರೌ ॥

**೯. ಶ್ರೀನಿವಾಸಾಚಾರ್ಯರು – ಭಾವಚಂದ್ರಿಕಾ**

ಇವರ ತಂದೆ ಗೋವಿಂದಾಚಾರ್ಯರು. (ಗೋವಿಂದಾರ್ಯಸ್ಯ ಪುತ್ರೇಣ ಶ್ರೀನಿವಾಸೇನ ನಿರ್ಮಿತಾ) ವ್ಯಾಸತೀರ್ಥೀಯ-ವೇದಾಂಗತೀರ್ಥೀಯ-ವರದರಾಜೀಯ-ಅನಂತಭಟ್ಟೀಯ-ವಾದಿರಾಜೀಯ ಟಿಪ್ಪಣಿಗಳಲ್ಲಿ ಹೇಳದ ಕೆಲವು ವಿಷಯಗಳನ್ನು ಹೇಳಿದ್ದೇನೆ ಎಂದು ಹೇಳಿ ಗ್ರಂಥ ಸಮಾಪ್ತಿ ಆಗಿದೆ. ಇವರು ತಮ್ಮ ಟಿಪ್ಪಣಿಯಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ತತ್ತ್ವಪ್ರಕಾಶಿಕಾ ಟಿಪ್ಪಣಿಯನ್ನು (೦.೯) ಮತ್ತು ವಿದ್ಯಾಭೂಷಣತೀರ್ಥರ ಸಂಗ್ರಹರಾಮಾಯಣಟಿಪ್ಪಣಿಯನ್ನು ಉದಾಹರಿಸುತ್ತಾರೆ. ಇದರಿಂದ ಇವರು ರಾಘವೇಂದ್ರಸ್ವಾಮಿಗಳ ನಂತರದವರೆಂದು ನಿರ್ಣಯ ಮಾಡಬಹುದು. ಶ್ರೀರಾಘವೇಂದ್ರಮಠದ ಶ್ರೀವಾದೀಂದ್ರತೀರ್ಥರ ಭೂಗೋಲವರ್ಣನೆಯನ್ನು ೨೧ ನೇ ಅಧ್ಯಾಯದ ಟಿಪ್ಪಣಿಯಲ್ಲಿ ಉದಾಹರಿಸುತ್ತಾರೆ. ಇದರಿಂದ ಅವರ ಅನಂತರದವರು ಅಥವಾ ಅವರ ಸಮಾನ ಕಾಲದವರು ಎಂದು ನಿರ್ಣಯಿಸಬಹುದು.

**೧೦. ರಾಮಾಚಾರ್ಯರು - ಭಾವವಿವೃತಿ**

ಇವರು ತಾವು ವಾಸುದೇವಯತಿಗಳ ಪೂರ್ವಾಶ್ರಮದ ಪುತ್ರರು. ಮತ್ತು ಪೂರ್ಣಬೋಧಾಚಾರ್ಯರ ಶಿಷ್ಯರು ಎಂದು ತಮ್ಮ ತಾತ್ಪರ್ಯನಿರ್ಣಯದ ಟಿಪ್ಪಣಿಯಲ್ಲಿ ಹೇಳಿಕೊಂಡಿದ್ದಾರೆ.

> **ಹನುಮದ್ಭೀಮಮಧ್ವಾದೀನ್ ಜಯಾರ್ಯಾನ್ ವ್ಯಾಸಯೋಗಿನಃ ।**
> **ರಘುನಾಥಮುನೀನ್ ವಂದೇ ಪೂರ್ಣಬೋಧಾನ್ ಗುರೂನಹಮ್ ॥ (ಆದಿ)**

ಹನುಮಭೀಮಮಧ್ವರನ್ನು, ಜಯತೀರ್ಥರನ್ನು, ವ್ಯಾಸತೀರ್ಥರನ್ನು, ರಘುನಾಥತೀರ್ಥರನ್ನು, ಗುರುಗಳಾದ ಪೂರ್ಣಬೋಧಾಚಾರ್ಯರನ್ನು ನಮಸ್ಕರಿಸುತ್ತೇನೆ.

> **ವಾಸುದೇವಯತೀಂದ್ರಾಣಾಂ ಪೂರ್ವಾಶ್ರಮಸುತೇನ ಹಿ ।**
> **ರಾಮನಾಮ್ನಾ ಕೃತಾ ಭಾವವಿವೃತಿಃ ಪೂರಿತಾ ತು ಯಾ ॥**

ವಾಸುದೇವಯತಿಪುಂಗವರ ಪೂರ್ವಾಶ್ರಮ ಮಗನಾದ ರಾಮನಿಂದ ರಚಿತವಾದ ಭಾವವಿವೃತಿ ಎಂಬ ಗ್ರಂಥದಿಂದ ಸಜ್ಜನರು ಸಂತುಷ್ಟರಾಗಲಿ ಎಂದು ಹೇಳಿದ್ದಾರೆ

ವಾಸುದೇವಯತಿಗಳ ಹಾಗೂ ಪೂರ್ಣಬೋಧಾಚಾರ್ಯರ ಬಗ್ಗೆ ಉಪಲಬ್ಧವಾದ ಸಂಗತಿಗಳು ಕೆಲವು ಹೀಗಿವೆ-

> **ಅವಕರ್ಣ್ಯ ಕರ್ಣಮಧುರಾಂ ತದಾಗತಿಂ ವರಪೂರ್ಣಬೋಧಬುಧಪೂರ್ವಸೂರಯಃ ।**
> **ಅಭಿಜಗ್ಮುರಂಚಿತಮುದಸ್ತಮಾದರಾದಪಿ ವಾಸುದೇವಯತಿರಾಟ್‌ಪುರಸ್ಸರಾಃ ॥ (ವಿದ್ಯಾಧೀಶವಿಜಯ.೯.೭)**

ಉತ್ತರಾದಿಮಠಾಧೀಶರಾದ ಶ್ರೀವಿದ್ಯಾಧೀಶತೀರ್ಥರು ಗೋದಾವರಿತೀರದ ಧರ್ಮಪುರಿಗೆ ದಿಗ್ವಿಜಯ ಮಾಡಿದಾಗ ವಾಸುದೇವಯತಿಗಳು ಅವರನ್ನು ಬಂದು ಸ್ವಾಗತಿಸುತ್ತಾರೆ. ಅವರ ಸಂಗಡ ಪೂರ್ಣಬೋಧಾಚಾರ್ಯರು, ನರಸಿಂಹಾಚಾರ್ಯರು ಮುಂತಾದವರು ಬಂದು ಸ್ವಾಗತಿಸಿದರು ಎಂದು ವಿದ್ಯಾಧೀಶವಿಜಯ ನಿರೂಪಿಸುತ್ತದೆ.

ಇದರಿಂದ ವಾಸುದೇಯತಿಗಳ ಮತ್ತು ಪೂರ್ಣಬೋಧಾಚಾರ್ಯರ ದೇಶ-ಕಾಲವನ್ನು ನಾವು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿದೆ.

ಪೂರ್ಣಬೋಧಾಚಾರ್ಯರ ಬಗ್ಗೆ ವಿದ್ಯಾಧೀಶವಿಜಯ ವಿಶಿಷ್ಟವಾಗಿ ಬೆಳಕು ಚೆಲ್ಲುತ್ತದೆ.

> **ಪೂರ್ಣಬೋಧಾಚಾರ್ಯಾದ್ಯಾಃ ಶಾಸ್ತ್ರಚರ್ಯಾನಿವಾರ್ಯಾಃ (೧೦.೫)**

ಪೂರ್ಣಬೋಧಾಚಾರ್ಯರು ಅತ್ಯುತ್ತಮ ವಿದ್ವಾಂಸರು, ವಾದಿನಿಗ್ರಹ ಸಮರ್ಥರು. ಸಮಕಾಲೀನ ಅನೇಕ ವಾದಿಗಳನ್ನು ಜಯಿಸಿದವರು ಎಂದು ವಿದ್ಯಾಧೀಶವಿಜಯ ಹೇಳುತ್ತದೆ. ಅವರ ಶಿಷ್ಯರು ಮತ್ತು ವಾಸುದೇವಯತಿಗಳ ಮಕ್ಕಳು ರಾಮಾಚಾರ್ಯರು. ತಮ್ಮ ಬಗ್ಗೆ ತಮ್ಮ ಮ.ತಾ. ನಿ. ಟಿಪ್ಪಣಿಯಲ್ಲಿ ಹೇಳುತ್ತಾರೆ.

**೧೧. ಭಾರತ ಶ್ರೀನಿವಾಸಾಚಾರ್ಯರು -**

ಇವರ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ. ಆದರೆ ತಮ್ಮ ಗ್ರಂಥದ ಉಪಸಂಹಾರದಲ್ಲಿ 'ಇತಿ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಟಿಪ್ಪಣ್ಯಾಂ ಶ್ರೀಡಂಬಳ ಆನಂದಾಚಾರ್ಯಶಿಷ್ಯ ಶ್ರೀನಿವಾಸಾಚಾರ್ಯ ವಿರಚಿತಾಯಾಂ ದ್ವಾತ್ರಿಂಶೋಽಧ್ಯಾಯಃ'ಎಂದು ಹೇಳಿದ್ದಾರೆ. ತಮ್ಮ ಗುರುಗಳು ಡಂಬಳ ಆನಂದಾಚಾರ್ಯರು ಎಂದಷ್ಟೇ ಹೇಳಿದ್ದಾರೆ. ಇವರು ಮಹಾಭಾರತದ ಸನತ್ಸುಜಾತೀಯಕ್ಕೂ ವ್ಯಾಖ್ಯಾನ ಮಾಡಿದ್ದಾರೆ. ಅದನ್ನು ತಂಜಾವೂರಿನ ಸರಸ್ವತಿ ಮಹಲ್ ಲೈಬ್ರರಿಯಲ್ಲಿ ನಾವು ಕಾಣಬಹುದಾಗಿದೆ. ಬಹುಶಃ ಆ ಕಾರಣದಿಂದಲೇ ಇವರನ್ನು ಭಾರತಶ್ರೀನಿವಾಸಾಚಾರ್ಯರೆಂದು ಕರೆದಿರಬಹುದು. ಇವರು ಬರೆದ ಮಹಾಭಾರತದ ವ್ಯಾಖ್ಯಾನ ವಿಕ್ಷಿಪ್ತವಾಗಿ ಮೈಸೂರು ಮತ್ತು ಚೆನ್ನೈನ ಗ್ರಂಥಾಲಯದಲ್ಲಿ ಈಗಲೂ ಉಪಲಬ್ಧವಾಗಿದೆ.

**೧೨. ತಿರುಮಲಾಚಾರ್ಯರು - ಅತಿವಿಶದವಾಕ್ಯಾರ್ಥವಿವೃತಿ**

ಇವರ ಬಗ್ಗೆ ಬಹಳ ವಿವರ ತಿಳಿದಿಲ್ಲ. ತಮ್ಮ ಗ್ರಂಥದ ಉಪಸಂಹಾರದಲ್ಲಿ ತಮ್ಮ ತಂದೆ ಜನಾರ್ದನಾಚಾರ್ಯರು. ಪರಮಾತ್ಮನ ಪ್ರೀತಿಗಾಗಿ ಈ ಟಿಪ್ಪಣಿಯನ್ನು ಬರೆದಿರುವುದಾಗಿ ಹೇಳಿ ತಮ್ಮ ಗ್ರಂಥವನ್ನು ದೇವರಿಗೆ ಸಮರ್ಪಣೆ ಮಾಡುತ್ತಾರೆ.

> ಜನಾರ್ದನಾಚಾರ್ಯಸುತಸ್ತು ಟೀಕಾಂ ಸುತಿರ್ಮಲೋ ಮಧ್ವಪದಾಬ್ಜಸೇವಿನಾಮ್ ।
> ದಾಸೋ ನಿತಾಂತಂ ಸ ಚಕಾರ ನಿರ್ಣಯೇ ದ್ವಾತ್ರಿಂಶಕೇ ಶ್ರೀಪುರುಷೋತ್ತಮಾರ್ಥಮ್ ॥

ಹೆಸರಿನಿಂದಲೇ ಸೂಚಿಸುವಂತೆ ಇವರ ಟಿಪ್ಪಣಿ ಅತ್ಯಂತ ವಿಸ್ತಾರವಾಗಿ ಇದೆ. ಎಲ್ಲ ಶ್ಲೋಕಗಳಿಗೂ ವ್ಯಾಖ್ಯಾನ ಮಾಡದಿದ್ದರೂ ವ್ಯಾಖ್ಯಾನ ಮಾಡಿದಲ್ಲಿ ಅತ್ಯಂತ ವಿಸ್ತಾರವಾಗಿ ಮಾಡುತ್ತಾರೆ. ಮೂಲದಲ್ಲಿ ಬರುವ ಪ್ರಮೇಯಗಳನ್ನು ಸರ್ವಮೂಲದ ಇತರ ಗ್ರಂಥಗಳಾದ ಸೂತ್ರಭಾಷ್ಯ, ಉಪನಿಷದ್ಭಾಷ್ಯ ಮುಂತಾದವುಗಳನ್ನು ಉದಾಹರಿಸಿ ವಿಸ್ತಾರವಾಗಿ ಚರ್ಚಿಸುತ್ತಾರೆ ಮತ್ತು ಇಲ್ಲಿ ಹೇಳಿದ ಪ್ರಮೇಯಗಳನ್ನು ಉಪಪಾದಿಸುತ್ತಾರೆ. ಅಷ್ಟೇ ಅಲ್ಲದೇ ಮಧುಸೂದನಭಿಕ್ಷುಗಳಂತೆ ತಾತ್ಪರ್ಯನಿರ್ಣಯದ ವಿಷಯದಲ್ಲಿ ಪ್ರಮಾಣಸಂಗ್ರಹ ಎಂಬ ಮತ್ತೊಂದು ಕೃತಿಯನ್ನು ರಚಿಸಿದ್ದಾರೆ. ಇದರಲ್ಲಿ ಶ್ರೀಮದಾಚಾರ್ಯರು ಹೇಳಿದ ಕಥೆ ಹಾಗು ಅದರ ನಿರ್ಣಯದ ವಿಷಯದಲ್ಲಿ ಪ್ರಮಾಣಗಳನ್ನು ಉದಾಹರಿಸುತ್ತಾರೆ.

ಇವರ ಟಿಪ್ಪಣಿಯ ಅಂಶವನ್ನು ಅಧ್ಯಾಯ ೮.೧೮೩ ಶ್ಲೋಕದಲ್ಲಿ ಮಧುಸೂದನ ಭಿಕ್ಷುಗಳು ಉದಾಹರಿಸುತ್ತಾರೆ. ಹಾಗಾಗಿ ಇವರು ಮಧುಸೂದನಭಿಕ್ಷುಗಳಿಗೂ ಪ್ರಾಚೀನರಾಗಿರಬಹುದು.

**೧೩. ಚೆಟ್ಟಿ ಆಚಾರ್ಯರು -**

ಇವರ ಹೆಸರು ಚೆಟ್ಟಿ ಕೋನೇರಿ ಆಚಾರ್ಯರು ಎಂದು. ಇವರ ಮನೆತನದವರು ಹಯಗ್ರೀವ ಉಪಾಸಕರು. ಈ ಮನೆತನದವರು ವಿದ್ಯೆ ವಾದಿಜಯ ಎಲ್ಲವನ್ನು ಆ ಹಯವದನನ ಕರುಣಾಕಟಾಕ್ಷದಿಂದ ಗಳಿಸಿದರು. ಇವರ ತಂದೆ ಹಾಗು ಗುರುಗಳು ವೇಂಕಟಾಚಾರ್ಯರು. ಹಯಗ್ರೀವದೇವರ ದಯೆಯಿಂದ ಇವರಿಗೆ ಬಾರದ ವಿದ್ಯೆ ಇಲ್ಲ. ಎದುರು ನಿಂತ ವಾದಿ ಇಲ್ಲ. ಇವರ ಪಿತೃವ್ಯರು ನರಸಿಂಹಾಚಾರ್ಯರು. ಅಣ್ಣಂದಿರು ವೇಂಕಟಾಚಾರ್ಯ ಮತ್ತು ಜನಾರ್ದನಾಚಾರ್ಯ.

ಎಲ್ಲರೂ ಹಯಗ್ರೀವ ಪೂಜಾಧುರಂಧರರು. ಜನಾರ್ದನಾಚಾರ್ಯರ ಬಳಿಯಲ್ಲಿಯೂ ಚೆಟ್ಟಿ ಆಚಾರ್ಯರು ಅಭ್ಯಾಸ ಮಾಡಿದ್ದಾರೆ. ಈ ಗ್ರಂಥ ಬರೆದು ಮುಗಿಸಿದ್ದು ಕ್ಷಯ ನಾಮ ಸಂವತ್ಸರ ಕಾರ್ತೀಕ ಶುದ್ಧ ತೃತೀಯಾ ಎಂದು ಹೇಳಿದ್ದಾರೆ.

ಹಯಗ್ರೀವ ದಂಡಕವನ್ನು ಬರೆದವರು ಶ್ರೀಮುಷ್ಣಂ ಚೆಟ್ಟಿ ಕೋನೇರಿ ಆಚಾರ್ಯರು ಎಂದಿದೆ. ಇಬ್ಬರು ಒಬ್ಬರೋ ಅಥವಾ ಬೇರೇಯೋ ಇನ್ನು ಸಂಶೋಧನೆ ಆಗಬೇಕಾಗಿದೆ.

**೧೪. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು – ಪ್ರಮೇಯಮಣಿಮಾಲಾ (ಪ್ರಮಾಣಮಾಲಾ)**

ದ್ವೈತ ವಾಙ್ಮಯಕ್ಕೆ ತಮ್ಮ ಟೀಕಾ-ಟಿಪ್ಪಣಿಗಳ ಮೂಲಕವಾಗಿ ಸೇವೆಯನ್ನು ಮಾಡಿದ ಜ್ಞಾನಿಗಳಲ್ಲಿ ತಾಮ್ರಪರ್ಣೀಮನೆತನದ ಆಚಾರ್ಯರು ಸುಪ್ರಸಿದ್ಧರು. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು ಶ್ರೀಸತ್ಯಪೂರ್ಣತೀರ್ಥರ ಸಮಕಾಲೀನರು. ಇವರ ತಂದೆ ವಿಠ್ಠಲಾಚಾರ್ಯರು. ವಿಠ್ಠಲಾಚಾರ್ಯರ ಗುರುಗಳು ನಾರಾಯಣಾಚಾರ್ಯರು. ಪರಮಗುರುಗಳು ಶ್ರೀಮುಷ್ಣಂ ನರಸಿಂಹಾಚಾರ್ಯರು.

ಸರ್ವಮೂಲಗಳಲ್ಲಿ ನಿರೂಪಿಸಿದ ರಹಸ್ಯತತ್ತ್ವಗಳನ್ನು ಜಿಜ್ಞಾಸುವಾದ ವ್ಯಕ್ತಿಗೆ ತೆರೆದ ನಿಧಿಯಂತೆ, ಬಿಡಿಸಿದ ಹಲಸಿನಂತೆ ಸುಲಲಿತವಾಗಿ ನಿರೂಪಿಸುವ ಗ್ರಂಥ ಸತ್ತ್ವರತ್ನಮಾಲಾ. ಈ ಅಪೂರ್ವಗ್ರಂಥವನ್ನು ರಚಿಸಿದವರು ತಾಮ್ರಪರ್ಣೀ ಆನಂದತೀರ್ಥಾಚಾರ್ಯರು. ಇವರ ಶಿಷ್ಯರು ಮತ್ತು ಅನುಜರು ಶ್ರೀನಿವಾಸಾಚಾರ್ಯರು. ಇವರ ಟಿಪ್ಪಣಿ ಪ್ರಮೇಯಮುಕ್ತಾವಲಿ . ಪ್ರಮೇಯಮಾಲಾ ಎನ್ನುವುದು ತಾತ್ಪರ್ಯನಿರ್ಣಯಕ್ಕೆ ಇವರು ಬರೆದ ಮತ್ತೊಂದು ಟಿಪ್ಪಣಿ ಎಂದು ಕೆಲವು ಪಂಡಿತರ ಅಭಿಪ್ರಾಯವಾಗಿದೆ. ತಮ್ಮದೇ ಆದ ವಿಶಿಷ್ಟವಾದ ಶೈಲಿಯಲ್ಲಿ ವ್ಯಾಖ್ಯಾನವನ್ನು ಮಾಡುತ್ತಾ ಶ್ರೀಮದಾಚಾರ್ಯರ ಪದದಿಂದ ಹೊಸಪ್ರಮೇಯಗಳನ್ನು ಹೇಳುತ್ತಾರೆ.

ಸುಜನ ವಿಧೇಯ

ಶ್ರೀನಿವಾಸತೀರ್ಥಾಚಾರ್ಯ ಹೆಬ್ಬೂರ

* * *

## ... सङ्केतसूची ...

| | | | | | |
|---|---|---|---|---|---|
| ब्र.सू. | ब्रह्मसूत्राणि. | भा.ता. | भागवततात्पर्यम् | तं.सा. | तन्त्रसारसङ्ग्रहः |
| सि.कौ | सिद्धान्तकौमुदी | वा.रा. | वाल्मीकिरामायणम | मा.भा. | माण्डूकोपनिषद्भाष्यम् |
| छा.उ. | छान्दोग्योपनिषत् | गी.भा. | गीताभाष्यम् | प.पु | पद्मपुराणम् |
| म.भा. | महाभारतम् | गी.ता. | गीतातात्पर्यम् | | |
| भाग. | भागवतम् | छा.भा. | छान्दोग्योपनिषद्भाष्यम् | | |
| तै.भा. | तैत्तिरीयोपनिषद्भाष्यम् | बृ.भा. | बृहदारण्यकोपनिषद्भाष्यम् | | |

## ಮೂಲಕೋಶಗಳ ಮಾಹಿತಿ

೧. **ವ್ಯಾಸತೀರ್ಥೀಯಾ-** ಇದರ ಮುದ್ರಣಕ್ಕೆ ಅವಲಂಬಿಸಿರುವುದು ಎರಡು ಹಸ್ತಪ್ರತಿಗಳು. ಎರಡೂ ಪ್ರತಿಗಳನ್ನು ಅನುಗ್ರಹಿಸಿದವರು ಶ್ರೀಸತ್ಯಾತ್ಮತೀರ್ಥರು. ಒಂದು ತಾಳೆಗರಿಯಲ್ಲಿ ನಂದಿನಾಗರಿ ಲಿಪಿಯಲ್ಲಿದೆ. ಇದು ಐದನೇ ಅಧ್ಯಾಯದಿಂದ ಉಪಲಬ್ಧವಾಗಿದೆ. ಅತ್ಯಂತ ಶುದ್ಧವಾಗಿದೆ. ಇನ್ನೊಂದು ದೇವನಾಗರಿಲಿಪಿಯಲ್ಲಿದೆ. ಅನೇಕ ಕಡೆ ಅಸ್ಪಷ್ಟವಾಗಿದೆ.

೨. **ವೇದಾಂಗತೀರ್ಥೀಯಾ-** ಇದರ ಮುದ್ರಣಕ್ಕೆ ಉಪಯೋಗಿಸಿದ್ದು ಎರಡು ಆಕರಗಳು. ಒಂದು ಪಂ. ಬನ್ನಂಜೆ ಗೋವಿಂದಾಚಾರ್ಯರು ತಾವು ಸಂಶೋಧಿಸಿದ ಆವೃತ್ತಿಯನ್ನು ಕೊಟ್ಟಿದ್ದಾರೆ. ಇನ್ನೊಂದು ಮೈಸೂರು ಪ್ರಾಚ್ಯ ವಿದ್ಯಾಸಂಶೋಧನಾಲಯದ ತಾಳೆಗರಿ ಪ್ರತಿ. ನಂದಿನಾಗರಿಯಲ್ಲಿ ಇದೆ. ಶುದ್ಧವಾಗಿದೆ. ಅಲ್ಲಲ್ಲಿ ಹಸ್ತಪ್ರತಿಯನ್ನು ಹುಳ ತಿಂದಿದೆ.

೩. **ವಾದಿರಾಜತೀರ್ಥೀಯಾ-** ಈ ಗ್ರಂಥ ಈಗಾಗಲೇ ಮುದ್ರಣವನ್ನು ಎರಡು ಬಾರಿ ಕಂಡಿದೆ. ಒಂದು ಉಡುಪಿಯ ಶೀರೂರು ಮಠದಿಂದ ಮುದ್ರಣವಾಗಿತ್ತು. ಮತ್ತೊಂದು ಪಂ. ಪ್ರಭಂಜನಾಚಾರ್ಯರು ಪ್ರಕಾಶಿಸಿದ್ದಾರೆ. ಇವೆರಡರ ಸಹಕಾರದಿಂದ ಸಂಶೋಧಿಸಲಾಗಿದೆ.

೪. **ಸತ್ಯಾಭಿನವೀಯಾ-** ಈ ಟಿಪ್ಪಣಿ ೧೯೬೮ರಲ್ಲಿ ಪಂ.ಗಲಗಲಿ ರಾಮಾಚಾರ್ಯರ ಸಂಶೋಧನೆಯ ಫಲವಾಗಿ ಸತ್ಯಧ್ಯಾನ ವಿದ್ಯಾಪೀಠದಿಂದ ಪ್ರಕಾಶಿತವಾಗಿದೆ. ಅದನ್ನು ಆಧರಿಸಿ ಇಲ್ಲಿ ಸಂಯೋಜಿಸಲಾಗಿದೆ.

೫. **ಮಧುಸೂದನೀಯಾ-** ಶ್ರೀಸತ್ಯಾತ್ಮತೀರ್ಥರು ಅನುಗ್ರಹಿಸಿದ ಒಂದು ಪ್ರತಿಯನ್ನು ಉಪಯೋಗಿಸಲಾಗಿದೆ. ಇದು ಶುದ್ಧವಾಗಿದೆ.

೬. **ಆದ್ಯ ವರದರಾಜೀಯಾ-** ಇದರ ಮುದ್ರಣಕ್ಕೆ ಎರಡು ಪ್ರತಿಗಳನ್ನು ಉಪಯೋಗಿಸಿದ್ದೇವೆ. ಒಂದು ಶ್ರೀಸತ್ಯಾತ್ಮತೀರ್ಥರು ಅನುಗ್ರಹಿಸಿದ ಪ್ರತಿ. ಮತ್ತೊಂದು ಸತ್ಯಧ್ಯಾನ ವಿದ್ಯಾಪೀಠದ ಗ್ರಂಥಾಲಯದ ಹಸ್ತ ಪ್ರತಿ.

೭. **ಅನಂತಭಟ್ಟೀಯಾ-** ಚೆನ್ನೈ ಓರಿಯಂಟಲ್ ಲೈಬ್ರರಿಯ ನಂದಿನಾಗರಿ ಲಿಪಿಯಲ್ಲಿ ತಾಳೆಗರಿಯ ಛಾಯಪ್ರತಿಯನ್ನು ಉಪಯೋಗಿಸಿ ಮುದ್ರಿಸಲಾಗಿದೆ. ಸಾಣೂರು ಶ್ರೀಕೃಷ್ಣಮೂರ್ತಿಆಚಾರ್ಯರ ಸಂಗ್ರಹದಲ್ಲಿರುವ ಹಸ್ತಪ್ರತಿಯನ್ನೂ ಉಪಯೋಗಿಸಲಾಗಿದೆ.

೮. **ಜನಾರ್ದನೀಯಾ-** ಇದಾಗಲೇ ೨೦ನೇ ಶತಮಾನದ ಆರಂಭದಲ್ಲಿ ಟಿ.ಆರ್.ಕೃಷ್ಣಾಚಾರ್ಯರಿಂದ ಮುದ್ರಣಕಂಡಿದೆ. ಆ ಪ್ರತಿಯನ್ನು ಮತ್ತು ಪಂ.ಪ್ರದೀಪಸಿಂಹಾಚಾರ್ಯರು ಕೊಟ್ಟ ಹಸ್ತ ಪ್ರತಿಯನ್ನು ಆಧರಿಸಿ ಇಲ್ಲಿ ಮುದ್ರಿಸಲಾಗಿದೆ. ಎರಡೂ ಪ್ರಾಯಃ ಶುದ್ಧವಾಗಿದೆ.

೯. **ತಾಮ್ರಪರ್ಣೀಯಾ-** ಇದರ ಮುದ್ರಣಕ್ಕೆ ಉಪಯೋಗಿಸಿದ್ದು ಎರಡು ಹಸ್ತಪ್ರತಿಗಳು. ಎರಡೂ ಶ್ರೀಸತ್ಯಾತ್ಮತೀರ್ಥರು ಅನುಗ್ರಹಮಾಡಿದ್ದು. ಪ್ರಮೇಯಮಣಿಮಾಲಾ ಎನ್ನುವ ಒಂದು ಪ್ರತಿ ವಿಸ್ತಾರವಾಗಿದೆ. ಅದನ್ನು ಪ್ರಧಾನವಾಗಿ ಇಲ್ಲಿ ಮುದ್ರಿಸಲಾಗಿದೆ. ಇನ್ನೊಂದು ಪ್ರಮಾಣಮಾಲಾ ಎಂದಿದೆ. ಇದರಲ್ಲಿ ಕೆಲವು ಹೆಚ್ಚಿನ ವಾಕ್ಯಗಳಿವೆ. ಎರಡೂ ಪ್ರತಿಗಳು ಶುದ್ಧವಾಗಿದೆ.

೧೦. **ಭಾರತಶ್ರೀನಿವಾಸಾಚಾರ್ಯಟಿಪ್ಪಣೀ-** ಇದರ ಸಂಶೋಧನೆಗೆ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ ತಂದ ತಾಳೆಗರಿಯ ಛಾಯಾಪ್ರತಿಯನ್ನು ಉಪಯೋಗಿಸಿದ್ದೇವೆ. ಇದು ಪೂರ್ಣವಾಗಿ ಉಪಲಬ್ಧವಾಗಿದ್ದು ನಂದಿನಾಗರಿಲಿಪಿಯಲ್ಲಿ ಇದೆ. ಶುದ್ಧವಾದ ಪ್ರತಿ.

೧೧. **ಭಾವಚಂದ್ರಿಕಾ-** ಇದರ ಸಂಶೋಧನೆಗೆ ಎರಡು ಪ್ರತಿಗಳನ್ನು ಉಪಯೋಗಿಸಿದ್ದೇವೆ. ಶ್ರೀಸತ್ಯಾತ್ಮತೀರ್ಥರು ಕರುಣಿಸಿದ ಒಂದು ಪ್ರತಿ. ಪಂ. ಪ್ರಭಂಜನಾಚಾರ್ಯರು ಕೊಟ್ಟ ದೇವನಾಗರಿ ಲಿಪಿಯಲ್ಲಿರುವ ಒಂದು ಪ್ರತಿ. ಎರಡೂ ಅಸ್ಪಷ್ಟವಾಗಿದೆ.

೧೨. **ಭಾವವಿವೃತಿ -** ಪಂ. ಪ್ರಭಂಜನಾಚಾರ್ಯರು ಕೊಟ್ಟ ದೇವನಾಗರಿ ಲಿಪಿಯಲ್ಲಿರುವ ಒಂದು ಪ್ರತಿಯ ಆಧಾರದ ಮೇಲೆ ಸಂಯೋಜಿಸಲಾಗಿದೆ.

೧೩. **ಅತಿವಿಶದವಾಕ್ಯಾರ್ಥವಿವೃತಿ -** ಪಂ. ಪ್ರಭಂಜನಾಚಾರ್ಯರು ಕೊಟ್ಟ ದೇವನಾಗರಿ ಲಿಪಿಯಲ್ಲಿರುವ ಒಂದು ಪ್ರತಿಯ ಸಹಾಯದಿಂದ ಸಂಶೋಧಿಸಲಾಗಿದೆ.

೧೪. **ಚಿಟ್ಟಟಿಪ್ಪಣೀ-** ಇದರಸಂಶೋಧನೆಗೆಮೂರು ಪ್ರತಿಗಳನ್ನುಉಪಯೋಗಿಸಿದ್ದೇವೆ. ಶ್ರೀಸತ್ಯಾತ್ಮತೀರ್ಥರು ಅನುಗ್ರಹಿಸಿ ದೇವನಾಗರಿಲಿಪಿಯ ಒಂದು ಪ್ರತಿ. ಪಂ. ಪ್ರಭಂಜನಾಚಾರ್ಯರು ಕೊಟ್ಟ ತೆಲುಗು ಲಿಪಿಯ ಪುಸ್ತಕ. ಪಂ. ಪಗಡಾಲ್ ರಾಮಮೂರ್ತ್ಯಾಚಾರ್ಯರು ಕೊಟ್ಟ ತೆಲುಗು ಪ್ರತಿ.

* * *

## ...ग्रन्थसम्पादनार्थ अवलम्बितग्रन्थसूची ...


| | |
|---|---|
| हरिवंशः | Chitrashala press, Pune/BORI |
| तन्त्रसारसङ्ग्रहः | Edited by Dr.Vyasanakere prabhanjanacharya. Shrimanmadhwa Radhdnta Samvardhakasabha, ShriBhandarkeremath,Udupi. |
| भागवतम् | Edited by P S Sheshagiri acharya Poornaprajna samshodhana mandiram, Bangalore.2004 |
| विष्णुपुराणम् | Nag Publishers, New Delhi 1985 |
| स्कन्दपुराणम् | Nag Publishers,New Delhi1982 |
| पद्मपुराणम् | Nag Publishers,New Delhi1984 |
| महाभारतम् | Nirnaya sagar Press,Mumbai.1906/BORI |
| वाल्मीकिरामायणम् | Parimala Publications, Delhi.1991 & Geeta Press,Gorakhpur. |
| भागवततात्पर्यम् | Sarvamulagranthah. Sri.Vyasa madhwa Seva Pratishthana.2002. |
| विष्णुधर्मोत्तरपुराणम् | Nag Publishers,New Delhi |
| तैत्तिरीयारण्यकम् | |
| मत्स्यपुराणम् | Nag Publishers,New Delhi |
| अग्निपुराणम् | Nag Publishers,New Delhi |
| गरुडपुराणान्तर्गत वेङ्कटेशमाहात्म्यम् | Nag Publishers,New Delhi |
| कूर्मपुराणम् | Nag Publishers,New Delhi |
| ब्रह्मपुराणम् | Nag Publishers,New Delhi |
| वराहपुराणम् | Nag Publishers,New Delhi |
| कालिकापुराणम् | Nag Publishers,New Delhi |
| शब्दकल्पद्रुमः | Rashtriya Sanskrit Sansthan, New Delhi |
| नीलकण्ठीयव्याख्यानम् | Nag Publishers,New Delhi |
| ब्रह्माण्डपुराणम् | Nag Publishers,New Delhi |

# टिप्पणीकारोदाहृतग्रन्थसूची

विष्णुपुराणम्
पद्मपुराणम्
स्कन्दपुराणम्
विष्णुधर्मोत्तरपुराणम्
महाभारतम्
हरिवंशः
उपनिषद्भाष्याणि
भागवतम्
नृसिंहपुराणम्
भागवततात्पर्यम्
वाल्मीकिरामायणम्
गीताभाष्यम्
गीतातात्पर्यम्
अनुव्याख्यानम्
ब्रह्मसूत्रभाष्यम्
वायुपुराणम्
न्यायसुधा

तन्त्रसारसङ्ग्रहः
ब्रह्मवैवर्तपुराणम्
भगवद्गीता
विष्णुसहस्रनामस्तोत्रम्
यमकभारतम्
ब्रह्माण्डपुराणम्
ब्रह्मसूत्राणि
पाणिनीयसूत्राणि
सिद्धान्तकौमुदी
छान्दोग्योपनिषत्
तैत्तिरीयोपनिषद्भाष्यम्
छान्दोग्योपनिषद्भाष्यम्
बृहदारण्यकोपनिषद्भाष्यम्
माण्डूकोपनिषद्भाष्यम्
विष्णुरहस्यम्
षट्प्रश्नटीका
छान्दोग्यभाष्यम्

ब्रह्मसूत्रभाष्यम्
भागवतयादुपत्यन्याख्यानम्
ऐतरेयभाष्यटीकाविश्वेश्वरतीर्थीया
तत्वप्रकाशिका
ऐतरेयब्राह्मणम्
जयोत्तरसंहिता
कूर्मपुराणम्
विश्वामित्रसंहिता
सन्यासपद्धतिः
विरोधोद्धारः
(ताम्रपर्णी आचार्यविरचितः)
तारतम्यस्तोत्रम्
(विद्याधीशतीर्थकृतम्)
ईशावास्यभाष्यम्
नारायणवर्मटीका
योगदीपिका
विश्वक्सेनसंहिता

# अंशावतारः

| अवतारः | मूलरूपम् | आवेशः |
|---|---|---|
| अक्रूरः | किशोरनामक सुरगायक | स्वायम्भुवमनु, ब्रह्मा |
| अजगरः | विद्याधरः | |
| अजगरः | नहुषः | |
| अर्जुनः | इन्द्रः | हरिः वायुः नरः |
| अर्जुनवृक्षौ | नलकूवरः, मणिग्रीवः | घुनिः,चमूः |
| अनिरुद्धः (कृष्णपौत्रः) | कामपुत्रानिरुद्धः | अनिरुद्धरूपपरमात्मा |
| अभिमन्युः | बुधः | चन्द्रः, कृष्णः, पाण्डवाः |
| अश्वत्थामा | रुद्रदेवः | |
| अञ्जनवर्मा (घटोत्कचपुत्र) | निष्ट्यः | |
| अम्बा | वराङ्गी(धुनामकवसुपत्नी) | |
| इन्द्रसेना-द्रौपदी | भारती | उमा, शची, श्यामला, उषा |
| इरावान् | मङ्गलः | वरुणः |
| उग्रसेनः | उग्रसेनगन्धर्वः | |
| उत्तमौजाः | परावसुः | अर्यमा |
| उद्धवः | बृहस्पतिः | वायुः |
| उल्मुकः | अर्यमा | |
| उषाः (बाणासुरपुत्री) | उषा (अनिरुद्धपत्नी) | |
| एकलव्यः | मणिमान् | |
| कर्णः | सूर्यः | परमात्मा, सहस्रवर्मा, नरकासुर |
| काली | भारतीदेवी | |
| कीचकः | बाणासुरः | |
| कीटः | हेतिः | |
| कुन्तिभोजः | कूर्मनामकमरुत् | |
| कुन्तिः | पाण्डुभार्या | |
| कृतवर्मा | शुक्लपक्षाभिमानिदेवता | पाञ्चजन्यः, प्रवहनामतमरुत् |
| कृपाचार्यः | विष्कम्भः | |
| कृपी | तारा(गुरुपत्नी) | |
| कृष्णपत्न्यः (१६१००) | अग्निपुत्राः | |
| पञ्चकेकयाः | पञ्च विश्वेदेवाः | |
| कैशिकः | शुन्धिनामकाग्निपुत्रः | |
| कंसः | कालनेमिः | भृगुः |
| क्रथः | पवमाननामाग्निपुत्रः | |
| गदः | चण्डः (हरिपार्षदः) | |
| गोपाः | देवाः | |
| गोप्यः | अप्सरसः | |

| | | |
|---|---|---|
| घटोत्कचः | निर्ऋतिः | शिवः |
| चारुदेष्णः | गणपतिः | |
| चित्रसेनः | खरः | |
| चित्राङ्गदा | शची | |
| चेकितानः | प्रवहनाममरुत् | |
| देवी (भीमपत्नी) | राका (पूर्णिमाभिमानिनी) | |
| जनमेजयः | चित्ररथनामकगन्धर्वः | त्वष्टा |
| जरा (व्याधः) | भृगु ऋषिः | |
| जरासन्धः | विप्रचित्तिः | |
| जाम्बवती | रमा | |
| जैमिनि ऋषिः | इन्द्रः | |
| डिभिकः | कैटभः | |
| त्रिवक्रा | पिङ्गला | |
| दमघोषः | दनुनामकगन्धर्वः | |
| देवकः | देवकनामकगन्धर्वमुनिः | |
| देवकी | अदितिः | |
| देवकी (धर्मराजपत्नी) | श्यामला | |
| देवकीषड्पुत्राः | मरीचिपुत्राः | |
| दुर्योधनः | कलिः | वायुदेवः |
| दुर्वासाः | शिवः | |
| दुःशासनः | इन्द्रजित् | |
| दुःशला | मृषा (मृषाभिमानिनी) | कुहूः (अमावास्याभिमानिनी) |
| दौःशासनिः | (दुःशासनपुत्रः) सुरान्तकः | |
| धृतराष्ट्रः | धृतराष्ट्रगन्धर्वः | |
| धृष्टकेतुः | अनुह्लादः | सविता |
| धृष्टद्युम्नः | अग्निः | |
| द्रुपदः | हूहूनामकगन्धर्वः | आवहनामकमरुत् |
| प्रतिविन्ध्यः | विश्वेदेवः | चित्ररथनामकगन्धर्वः |
| सुतसोमः | विश्वेदेवः | अभिताम्रनामकगन्धर्वः |
| श्रुतकीर्तिः | विश्वेदेवः | किशोरनामकगन्धर्वः |
| शतानीकः | विश्वेदेवः | गोपालनामकगन्धर्वः |
| श्रुतकर्मा | विश्वेदेवः | वलनामकगन्धर्वः |
| द्रोणाचार्यः | वृहस्पतिः | ब्रह्मा |
| दन्तवक्रः | विजयः | हिरण्याक्षः |
| नकुलः | नासत्यः | सुन्दररूपवायु, श्रीहरिः |
| सहदेवः | दस्रः | सुनीतिः, श्रीहरिः |
| नकुलः | क्रोधनामकासुरः | |
| नरः | शेषः | श्रीहरिः, वायुः |

| | | |
|---|---|---|
| नक्राः (अर्जुनग्राहिणः) | पश्चाप्सरसः | |
| नन्दगोपः | द्रोणनामकवसुः | |
| प्रद्युम्नः | कामः | प्रद्युम्नरूपी विष्णुः |
| पार्वती (नकुलपत्नी) | तिलोत्तमानाम्नी अप्सराः | |
| पुरोचनः | प्रहस्तः | |
| पूतना | ताटका | उर्वशी |
| पाण्डुराजः | परावहनामकमरुत् | वायुः |
| पैल ऋषिः | शेषः | |
| पौण्ड्रकवासुदेवः | वेनः | |
| पौण्ड्रकमाता | दितिः | |
| बलरामः | शेषः | शुक्लकेशरूपश्रीहरिः |
| बभ्रुवाहनः | जयन्तः | कामः |
| बाणासुरः | बाणासुरः | |
| बाह्लीकः | प्रह्लादः | वायुः |
| भगदत्तः | कुबेरः | शिवः |
| भानुः (सत्यभामापुत्रः) | सवितृनामकसूर्यः | |
| भानुमती | अलक्ष्मीः | गिरिजा |
| भीमसेनः | वायुदेवः | श्रीहरिः |
| भीष्मः | द्युनामकवसुः | ब्रह्मा |
| भीष्मकः | मित्रः | राहुः |
| भूरिः | अजैकपाद्नामकरुद्रः | |
| भूरिश्रवाः | अहिर्बुध्निनामकरुद्रः | शिवादिसकलरुद्राः |
| माद्री | पाण्डुपत्नी | |
| मध्वाचार्याः | वायुदेवः | |
| महाभिषक् | वरुणः | |
| मन्द्रद्युम्नः | पुरन्दरनामकः इन्द्रः | |
| यशोदा | धरा (द्रोणवसुपत्नी) | |
| यादवाः | देवाः | |
| युधामन्युः | विश्वावसुः | धातृनामकसूर्यः |
| युयुत्सुः | निर्ऋतः (निर्ऋतेः अनुजः) | |
| रुक्मिणी | रमादेवी | |
| रोहिणी | सुरभिः | |
| रुक्मवती | रतिः | |
| रुक्मी | इल्वलः | शुचिनामकाग्निः |
| रेवती | वारुणी | |
| रोमहर्षणः | कामदेवः | |
| लक्षणः (दुर्योधनपुत्रः) | अक्षकुमारः | |
| लक्षणा (साम्बपत्नी) | रतिः | |

।

| | | |
|---|---|---|
| वसुदेवः | कश्यपः | |
| विकर्णः | अतिकायः | |
| विदुरः | यमः | |
| विपृथुः | सौम्यनामकमरुत् | |
| विराटः | हाहानामकगन्धर्वः | विवहनामकमरुत् |
| वैशम्पायन ऋषिः | ब्रह्मा | |
| वीरसेनः | त्वष्टनामकसूर्यः | |
| वेदव्यासशिष्यमुनयः | देवाः | |
| शकुनिः | द्वापरः | |
| शक्रदेवः | मणिभद्रनामकयक्षः | |
| शठः | अर्यमानामकसूर्यः | |
| शलः | विरूपाक्षनामकरुद्रः | |
| शल्यः | संह्लादः | |
| शर्वत्राता | समानवायुः | |
| शिखण्डी | अम्बा | तुम्बुरुः |
| शुकाचार्यः | शिवः | वायुः |
| शुकी | घृताची | |
| शुद्धोधनः | त्रिपुरासुरमुख्यः | |
| शृगालवासुदेवः | धुन्धुः | |
| शृगालमाता | दनुः | |
| शैंब्यः | ऋभुः | |
| शन्तनुः | वरुणः | |
| सत्यजित् | चित्रसेननामकगन्धर्वः | मित्रनामकसूर्यः |
| सत्यभामा | रमादेवी | |
| सत्यवती | अच्छोदा (पितृपुत्री) | |
| सर्वोत्तुङ्गः | प्राणवायुः | |
| सहदेवः (जरासन्धपुत्र) | पत्रतापाख्यरुद्रः | |
| सात्यकिः | कृष्णपक्षाभिमानी | गरुडः, संवह, सुदर्शनचक्रः |
| साल्वः | वलिनामकदैत्यः | |
| सुभद्रा | त्रिजटा | उमा |
| सुमन्तु ऋषिः | गरुडः (ब्रह्मा च) | |
| सोमदत्तः | पत्रतापाख्यरुद्रः | |
| सैन्धवः | कालकेयगणस्थदानवः | |
| सञ्जयः | तुम्बुरुः | |
| साम्वः | कामः | ब्रह्मा |
| सुहोत्रः | चित्रगुप्तः | |
| हिडिम्वा | श्रीः (स्वर्गैश्वर्याभिमानिनी) | भारती |
| हंसः | मधुः | |

★★★

# विषयानुक्रमणिका

## अष्टादशोऽध्यायः १८



## एकोनविंशोऽध्यायः १९

**विंशोऽध्यायः २०**

**एकविंशोऽध्यायः २१**

☆ ☆ ☆

।। श्रीदिग्विजयरामो विजयतेतराम् ।।

श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

## अथ अष्टादशोऽध्यायः

**यदा रामादवाप्तानि दिव्यास्त्राणि प्रपेदिरे ।**
**द्रोणात् कुमारास्तेष्वासीत् [1]सर्वेष्वप्यधिकोऽर्जुनः ।।१।।**

**व्यासतीर्थीया–** 'धन्विश्रेष्ठं कृतावानर्जुनं च' (ता.नि.१५.६६) इत्युक्तमनुवदन् तत्सङ्गतत्वेनोत्तर-कथामाह– **यदेत्यादिना** ।।१।।

**वरदराजीया–** ।। **यदेत्यादिना** ।। रामात् परशुरामात् अवाप्तानि, द्रोणेनेति शेषः । तानि द्रोणात् कुमाराः अर्जुनाद्याः प्रपेदिरे । तदा तेषु कुमारेषु ।।१।।

**जनार्दनीया–** ।। **यदेति** ।। रामात् परशुरामादवाप्तानि, द्रोणेनेति शेषः ।।१।।

**ताम्रपर्णीया–** तेषु द्रोणात् प्राप्तास्त्रेषु कुमारेषु ।।१।।

**चेट्टि–** 'धन्विश्रेष्ठं कृतवानर्जुनं च' इत्युक्तं अनुवदन् तत्सङ्गतत्वेनोत्तरकथामाह– **यदेत्यादिना** ।। रामात् परशुरामादवाप्तानि प्राप्तानि, द्रोणेनेति शेषः । दिव्यास्त्राणि यदा द्रोणात् कुमाराः अर्जुनाद्याः प्रपेदिरे । तदा तेषु सर्वेषु कुमारेषु अपि अर्जुनः अधिकः आसीत् ।।१।।

**निजप्रतिभया जानन् [2]सर्वास्त्राणि ततोऽधिकम् ।**
**नास्त्रयुद्धं क्वचिद् भीमो मन्यते धर्ममञ्जसा ।।२।।**

---

१. 'बुद्धियोगबलोत्साहः सर्वास्त्रेषु च निष्ठितः । अस्त्रे गुर्वनुरागे च विशिष्टोऽभवदर्जुनः ।। तुल्येष्वस्त्रोपदेशेषु सौष्ठवेन च वीर्यवान् । एकः सर्वकुमाराणां बभूवातिरथोऽर्जुनः ।।' इत्यादिपर्वणि १४२.७४-७५.

२. भीमः अर्जुनादिभ्यो अतिशयेन अभ्यधिकं सर्वाण्यप्यस्त्राणि जानाति । अत एव द्रोणादस्त्रप्राप्त्यभावेऽपि भारते बहुधा अस्त्रविद्यापारङ्गतानां द्रोणार्जुनकर्णाश्वत्थामसाम्यमुच्यते । तथाहि- 'गदाभृतां नास्ति समोऽत्र भीमाद् हस्त्यारोहे नास्ति समश्च तस्य । रथेऽर्जुनादाहुरहीनमेनं बाह्वोर्बलेनायुतनागवीर्यम् ।' उद्योगपर्वणि-२२.१४. 'अस्त्रे द्रोणार्जुनसमं वायुवेगसमं जवे । महेश्वरसमं क्रोधे को हन्याद् भीममाहवे ।' इति उद्योगपर्वणि-५१.१४. 'भीमसेनस्तु राजेन्द्र रथोऽष्टगुणसंमितः । न तस्यास्ति समो युद्धे गदया सायकैरपि ।। नागायुतबलो मानी तेजसा न स मानुषः ।।' इति उद्योगपर्वणि-१६९.४-५.

**व्यासतीर्थीया–** ननु कस्माद्भीमो द्रोणात् सर्वाधिक्येन नास्त्राण्यापेत्यत आह– **नेति** ।। कारणान्तरमाह– **निजेति** ।। अस्त्रयुद्धस्याधर्मत्वादस्त्राभ्यासाभावे तदज्ञत्वं स्यादित्यतो वा उक्तम्– **निजेति** ।।२।।

**वरदराजीया–** ननु भीमे विद्यमाने कथं अर्जुनोऽधिक आसीदित्युच्यते इत्यत आह– **निजेति** ।। स्वरूपप्रज्ञया भीमः ततः अर्जुनात् । तथापि अस्त्रयुद्धं कचिदपि अञ्जसा धर्मं न मन्यते ।।२।।

**जनार्दनीया–** ननु सर्वविद्याविशारदे वृकोदरे विद्यमाने कथं बीभत्सुरधिक आसीदित्युच्यत इत्यत आह– **निजेति** ।। निजप्रतिभया स्वरूपप्रज्ञया ततोऽर्जुनात् । गुरुप्रसादप्राप्तास्त्रज्ञानेषु अर्जुनोऽधिक इति भावः । अतः अस्त्रयुद्धं धर्मं न मन्यते ।।२।।

**ताम्रपर्णीया–** ननु तर्हि भीमादप्याधिक्यं प्राप्तमित्यतो न द्रोणादस्त्रलाभो भीमस्येत्याह– **निजेति**।। ततो द्रोणात् अर्जुनाच्च । ननु प्रतिभयास्त्रज्ञत्वे कुतो नास्त्रयुद्धं करोति भीम इत्यत आह– **नेति** ।। अञ्जसा धर्मं मुख्यधर्मम् ।।२।।

**भारतश्री–** भीमरूपमपेक्ष्येयमुक्तिः मूलरूपेणान्यत्र अस्त्रयुद्धस्य कृतत्वात् । तदुक्तं एकादशाध्याये– 'निरीक्ष्य शक्रं च विमोहितं द्रुतं न्यवारयत् तं पवनः शरौघैः । अस्त्राणि तस्यास्त्रवरैः निवार्य चिक्षेप तस्योरसि काञ्चनीं गदाम् ।।'(१८४) इति ।।२।।

**चट्टि–** ननु सर्वज्ञे भीमे विद्यमाने कथं बीभत्सुरधिक आसीदित्युच्यत इत्यत आह– **निजेति** ।। निजप्रतिभया स्वरूपप्रज्ञया सर्वास्त्राणि ततोऽर्जुनात् अधिकं यथा भवति तथा जानन् भीमः अस्त्रैः युद्धं कचिदपि अञ्जसा धर्मं न मन्यते ।।२।।

**न हि भागवतो धर्मो देवताभ्युपयाचनम् ।**
**ज्ञानभक्ती हरेस्तृप्तिं विना विष्णोरपि कचित् ।।३।।**

**व्यासतीर्थीया–** अस्त्रयुद्धस्याञ्जसा धर्मत्वाभावः कुत इत्यत आह– **(न हीति)** ।। तत्र कैमुत्यं चाह– **ज्ञानेति** ।।३।।

**वरदराजीया–** हि यस्मादस्त्रमन्त्रैः देवताभ्युयाचनं देवताप्रार्थनं भागवतो धर्मो न भवतीत्यर्थः ।।३।।

**अनन्तभट्टीया–** विष्णोरिति पञ्चमी ।।३।।

**जनार्दनीया–** हि यस्मात् । देवताभ्युपयाचनं देवताप्रार्थनम्, अस्त्रमन्त्रैरिति शेषः । हरेर्ज्ञानं च भक्तिश्च ज्ञानभक्ती । तृप्तिं विना विष्णोरपि सकाशात् अन्यं नाकाङ्क्ष्यं नापेक्ष्यम् । अन्येभ्यो नाकाङ्क्ष्यमिति किमुत? किमु वक्तव्यम् ।।३-४।।

**ताम्रपर्णीया–** भागवतधर्मरीतिप्रदर्शनेनोपपादयति– **न हीति** ।। तत्र कैमुत्यमाह– **ज्ञानेति** ।। काम्यफलप्रदमस्त्रं अन्येभ्यो देवेभ्यो नाकाङ्क्ष्यमिति किमु । स्वाधिकाराभिकामनं तु आधिकारिकदेवानां आधिकारिकाणां भगवत्प्रीत्यर्थत्वात् तृप्तिपदेनैव विवक्षितमिति भावः ।।३।।

**चट्टि–** हि यस्मात् देवताभ्युपयाचनम्, अस्त्रमन्त्रैरिति शेषः । भगवत्सम्बन्धिधर्मः न भवति । हरेः ज्ञानं च भक्तिश्च ज्ञानभक्ती । तृप्तिं च विना विष्णोरपि सकाशात् अन्यं नाकाङ्क्ष्यं नापेक्ष्यम् । अन्येभ्यो देवेभ्यो काम्यफलप्रदं अस्त्रं नाकाङ्क्ष्यमिति किमु वक्तव्यम् ।। ३-४ ।।

**नाऽकाङ्क्ष्यं किमुतान्येभ्यो ह्यस्त्रं काम्यफलप्रदम् ।**
**शुद्धे भागवते धर्मे निरतो यद् वृकोदरः ।।४।।**

**व्यासतीर्थीया–** न काम्यमस्त्रं अस्त्रयुद्धस्याभागवतधर्मत्वेऽपि वृकोदरः कस्मान्नास्त्रण्याप इत्यत्र किमायातमित्यत आह– **शुद्ध इति** ।।४।।

**वरदराजीया–** विष्णोरपि सकाशात् नाकाङ्क्ष्यं न प्रार्थ्यम् । अन्येभ्यो देवेभ्यो नाकाङ्क्ष्यमिति किमु । अस्त्रं काम्यफलप्रदं हि प्रसिद्धमित्यर्थः ।।४।।

**भावविवृतिः–** शुद्धे भागवते धर्मे भगवद्धर्ममात्रे निरतस्तस्मात् काम्यकर्मकृन्नैवेत्यर्थः । 'न हि भागवतो धर्मो देवताभ्युपयाचनम्' इति सामान्यतो भागवतानां देवतायाचनस्य निषेधितत्वात् ।।४-७।।

**ताम्रपर्णीया–** नन्वस्त्रस्य काम्यफलप्रदत्वेन देवताभ्युपयाचनस्य भागवतधर्मत्वाभावे कथमर्जुनादिभिः तदनुष्ठेयं स्यादितरैरनुष्ठेयत्वे भीमेनाप्यनुष्ठेयत्वं किं न स्यादित्यत आह– **शुद्ध इति** ।। अन्येषां तदभावस्य 'अन्ये भागवतत्वेऽपि'(ता.नि-१८.१८) इत्यादिना वक्ष्यमाणत्वादिति भावः ।।४।।

**न काम्यकर्मकृत् तस्मान्नायाचद् देवमानुषान्[१] ।**
**न हरिश्चार्थितस्तेन कदाचित् [२]कामलिप्सया ।।५।।**

**व्यासतीर्थीया–** न केवलं मानुषान् देवान् (काम्यादिना) नायाचत् किं तर्हि इत्यत आह– **हरिरिति** ।।५।।

**वरदराजीया–** यत् यस्मात् तस्मात् न काम्यकर्मकृत् । देवान् मानुषांश्च न अयाचत् न प्रार्थितवान् । कामलिप्सया विषयलाभेच्छया ।।५।।

---

१. 'दैवमानुषान्' इति भावविवृतिकाराणां पाठः ।
'दृष्ट्वापि च महाराजं नाहं याचितुमुत्सहे । नहि याचन्ति राजान एष धर्मः सनातनः ।। न चाहं हातुमिच्छामि क्षात्रधर्मं कथञ्चन ।।' इति वनपर्वणि-१५५.१०-११. कुबेरानुयायिनः क्रोधवशनामकान् प्रति भीमवचनम् ।

२. 'काम्यलिप्सया' इति जनार्दनीय-चट्टिपाठः

**भावविवृतिः–** 'दैवमानुषान्' इत्यत्र दैवान् मानुषांश्चेत्यर्थः ।।५।।

**जनार्दनीया–** यत् यस्मात् तस्मात् न काम्यकर्मकृत् काम्यकर्मफलाकाङ्क्षी न भवतीत्यर्थः । नायाचत् । काम्यलिप्सया विषयप्राप्तीच्छया ।।५।।

**ताम्रपर्णीया–** न केवलं देवान् मानुषान्नायाचत् । किन्तर्हि इत्यत आह– **न हरिरिति** ।।५।।

**चट्टि–** यद्यस्मात् वृकोदरः शुद्धे भागवते धर्मे निरतः तस्मात् काम्यकर्मकृत् न भवति । अत एव देवमानुषान् नायाचत् न प्रार्थितवान् । हरिश्च तेन भीमेन कदाचित् काम्यलिप्सया विषयप्राप्तीच्छया न अर्थितः न प्रार्थितः ।।५।।

**भिक्षामटंश्च हुङ्कारात् करवद् वैश्यतोऽग्रहीत् ।**
**नान्यदेवा नतास्तेन वासुदेवान्न पूजिताः ।।६।।**

**व्यासतीर्थीया–** ननु भिक्षायाः याचितत्वात् कथं मानुषान् नायाचदित्यत आह– **भिक्षामिति** ।। क्षत्रियो वैश्यतः करमिव । न केवलमन्यदेवता याचिताः अपि तर्हि विशेषमाह– **नान्येति** ।।६।।

**वरदराजीया–** तर्हि भीमेन कथं भैक्ष्यं याचितमित्यत आह– **भिक्षामिति** ।। भिक्षां याचमानोऽपि वैश्यतः क्षत्रियः करवत् अग्रहीत् न तु प्रार्थनया इत्यर्थः । वासुदेवादन्यदेवाः रुद्राद्याः भीमेन न नता न नमस्कृताः पूजिताश्च ।।६।।

**अनन्तभट्टीया–** क्षत्रियो वैश्यतः करमिव ।।६।।

**जनार्दनीया–** ननु तर्हि भीमः कथं भिक्षामयाचतेत्यत आह– **भिक्षामिति** ।। राजा वैश्यात् करं यथा गृह्णाति तद्वत् वैश्यतः अग्रहीत् । न तु प्रार्थनयेत्यर्थः ।।६।।

**ताम्रपर्णीया–** ननु भिक्षायाः याचितत्वात् कथं नायाचदित्युक्तमित्यत आह– **भिक्षामटन्निति**।। भिक्षामुद्दिश्य चरन्नपि करवद्धुङ्काराद् वैश्यतो भिक्षामग्रहीत् । न ब्राह्मणादिभ्य इत्यर्थः । तथा सति हुङ्कारानुपपत्तेरिति भावः । 'भीमो विशां सदन एव' इति (ता.नि-१९.६७) वक्ष्यति । शुद्धभागवत-धर्मरतत्वमुपपादयति– **'नान्य देवा'** इत्यादिना **'प्रेरयामास नार्थनात्'** इत्यन्तेन ।।६-८।।

**भारतश्री–** वैश्यत करवदग्रहीत् नान्यत्र तु कथञ्चनेति ।।६।।

**चट्टि–** ननु तर्हि भीमः कथं भिक्षामयाचतेत्यत आह– **भिक्षामिति** ।। भिक्षामटन् याचमानश्च राजा वैश्यतः वैश्यात् करं यथा गृह्णाति तद्वद् हुङ्कारात् अग्रहीत् । न तु प्रार्थनयेत्यर्थः । तेन भीमेन वासुदेवादन्यदेवाः रुद्राद्याः न नताः न नमस्कृताः न पूजिताश्च ।।६।।

**[1]न प्रतीपं हरेः क्वापि स करोति कथञ्चन ।**
**[2]अनुपस्करिणो युद्धे नाभियाति ह्युपस्करी ।**
**[3]नापयाति युधः क्वापि न क्वचिच्छद्म चाऽचरेत् ॥७॥**

**व्यासतीर्थीया–** वैष्णवधर्मप्रसङ्गात् ज्ञानार्थमन्यानपि वैष्णवधर्मान् ख्यापयन्, न केवलमन्यदेवाभ्यर्थनादिकं नाकरोदितः अन्यश्चेत्याह– **प्रतीपमित्यादिना** ॥७॥

**वरदराजीया–** स भीमः प्रतीपं विरोधम् । अनुपस्करिणः वर्मादिसाधनरहितान् स्वयमुपस्करी तद्वान् । युधः युद्धात् नापयाति न निवर्तते । छद्म अदृश्यत्वादि छद्म न आचरेत् ॥७॥

**अनन्तभट्टीया–** करोति, और्ध्वदेहिकमिति शेषः । उपस्करः वर्मादिसाधनम् ॥७॥

---

१. 'वासुदेवानुगो नित्यं तथा विष्णुवशे स्थितः । वासुदेवप्रतीपं तु न शृणोति न पश्यति ॥' इति स्कन्दपुराणे वैष्णवखण्डे वैशाखमाहात्म्ये-१९.६४.

२. शुद्धक्षत्रियधर्मनिष्ठो हि भीमसेनः । तथा हि- 'एवं प्रायो हि धर्मोऽयं क्षत्रियाणां नराधिप । शुद्धे क्षत्रियधर्मे च निरतोऽयं वृकोदरः' इति आश्रमवासिकपर्वणि-१४.८.
●'अधर्मविजयो राज्ञो नृपलोके भयावहः । अधर्मविजयादर्थैः यच्छिद्रमुपदीयते ॥ छिद्रादेव फलं छिद्रं तस्य स्यात् नात्र संशयः ॥ समस्समेन योद्धव्यो नापचारो रणे द्विज । सन्नद्धेन च सन्नद्धः साश्वश्चाश्वगतेन तु ॥ रथी च रथिना राम पदातिश्च पदातिना । कुञ्जरस्थो गजस्थेन योद्धव्यो भृगुनन्दन ॥ विमुखो भग्नगात्रश्च स्त्रीबालपरिरक्षिता । व्यायुधो भग्नगात्रश्च तथैव शरणागतः । परेण युध्यमानश्च युद्धप्रेक्षक एव च ॥ आर्तस्तोयप्रदाता च दण्डपाणिस्तथैव च । एते रणे न हन्तव्या क्षत्रधर्ममभीप्सता ॥' इति क्षत्रियधर्मः उक्तः विष्णुधर्मोत्तरे । द्वितीयखण्डे-१७७.७०-७६.
●'..भग्नानां विनिवर्तताम् । ब्रह्महत्याफलं तेषां तथा प्रोक्तं पदेपदे ॥ यः सहायान् परित्यज्य स्वस्तिमान् गन्तुमिच्छति । अस्वस्ति तस्य कुर्वन्ति देवाः शक्रपुरोगमाः । अश्वमेधफलं प्रोक्तं भग्नानामनिवर्तताम् । पदेपदे महाभागा सम्मुखानां महात्मनाम् । देवस्त्रियस्तथा लक्ष्मीः पाप्मानमयशस्तथा । प्रतीक्ष्यन्ते महाभाग सङ्ग्रामे समुपस्थिते । पराङ्मुखा मया ग्राह्या जीवन्तोऽप्यभवा मृताः । इत्येवमयशस्तस्य पाप्मना सह तिष्ठति । लक्ष्मीः सन्तिष्ठते तस्य जीवतः कृतकर्मणः । मृतस्य चापि तिष्ठन्ति विमानस्थाः सुरस्त्रियः ॥' इति विष्णुधर्मोत्तरे द्वितीयखण्डे-१७७.६३-६९.

३. कर्ण उवाच- 'नैष जातु महाबाहुर्जीवन्नाहवमुत्सृजेत् । न चेमान् पुरुषव्याघ्र सिंहनादान् सहिष्यति ॥ न चापि पाण्डवा युद्धे भज्येरन्निति मे मतिः । शूराश्च बलवन्तश्च कृतास्त्रा युद्धदुर्मदाः ॥' इति द्रोणपर्वणि-२२.१८-१९.
'अर्थनाशो वधोऽकीर्तिरयशश्च पलायने । अमनोज्ञाऽसुखावाचः पुरुषस्य पलायतः । प्रतिध्वस्तोष्ठदन्तस्य न्यस्तसर्वायुधस्य च । हित्वा पलायमानस्य सहायान् प्राणसंशये । अमित्रैरवरुद्धस्य द्विषतामस्तु नः सदा ॥ मनुष्यापसदा ह्येते ये भवन्ति पराङ्मुखाः ॥ राशिवर्धनमात्रास्ते नैव ते प्रेत्य नो इह ॥' इति शान्तिपर्वणि-१००.३६-३८.

